# ಸಿದ್ಧಗಂಗಾ

ಸಂಪುಟ 26 ಸಂಚಿಕೆ-12 ಡಿಸೆಂಬರ್ 1996

ಧರ್ಮವೆಂದರೇನು? ಮನುಷ್ಯ ಮನುಷ್ಯನಾಗಿ ಬಾಳುವುದೇ
ಧರ್ಮ. ಮೂಲಭೂತ ಆವಶ್ಯಕತೆಗಳನ್ನು ಪೊರೈಸುವುದೇ
ಧರ್ಮದಗುರಿ. ಪ್ರತಿಯೊಬ್ಬ ವ್ಯಕ್ತಿ, ಪ್ರತಿಯೊಂದು
ಕುಟುಂಬ " ಕರ್ತಾರನಕಮ್ಮಟ " ವನ್ನು
ಗೌರವಿಸುತ್ತ ಶ್ರದ್ಧಾ ನಿಷ್ಠೆಗಳಿಂದ ತನ್ನಿಂದಾ
ಗುವಷ್ಟು ಪರೋಪಕಾರವನ್ನು ಮುಕ್ತ
ಮನಸ್ಸಿನಿಂದ ಮಾಡುವಲ್ಲಿ ಧರ್ಮದ
ರಹಸ್ಯವಡಗಿದೆ.

ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.

ಪ್ರಕಾಶಕರು:
ಲೆಯ ವಿದ್ಯಾರ್ಥಿಗಳ ಸಂಘ,
ಸಿದ್ಧಗಂಗಾ ಕ್ಷೇತ್ರ.

## ಆಮಂತ್ರಣ

ಶ್ರೀ ಸಿದ್ಧಗಂಗಾ ಮಠದಲ್ಲಿ ದಿನಾಂಕ 12-1-91 ಮತ್ತು 13-1-91ರಂದು **ಪರಮ ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳವರ ಐವತ್ತನೆಯ ಪುಣ್ಯರಾಧನೆ** ಮತ್ತು **ಗ್ರಾಮಾಂತರ ಬಸವ ಜಯಂತಿ** ವಾರ್ಷಿಕ ಸಮಾರೋಪ ಸಮಾರಂಭ ನಿಯೋಜಿತವಾಗಿದೆ. ನಾಡಿನ ಸುಪ್ರಸಿದ್ಧ ವಿದ್ವಾಂಸರಾದ ಡಾ|| ಎಚ್. ತಿಪ್ಪೇರುದ್ರಸ್ವಾಮಿಗಳು. ಡಾ|| ಎಸ್. ಎಂ. ವೃಷಭೇಂದ್ರಸ್ವಾಮಿಗಳು, ಡಾ|| ಎಸ್. ಬಸವರಾಜ ಮಲಶೆಟ್ಟಿಯವರು. ಡಾ|| ಪಿ. ವಿ. ನಾರಾಯಣ **ಅವರು**. ಡಾ|| ಎಸ್. **ಅನಂತನಾರಾಯಣ ಅವರು**. ಪ್ರೊ|| ಜಿ.ಎಸ್. ಸಿದ್ಧಲಿಂಗಯ್ಯನವರು ಮುಂತಾದವರು ಸಮಾರಂಭದ ಮುಖ್ಯ ಭಾಷಣಕಾರರಾಗಿ ಆಗಮಿಸಲು ಒಪ್ಪಿರುತ್ತಾರೆ.

ಶ್ರೀಮಠದ ಭಕ್ತಾದಿಗಳಾದ **ತಮಗೆ** ಹೃತ್ಪೂರ್ವಕವಾಗಿ ಆಮಂತ್ರಿಸುತ್ತೇವೆ.

---

## ಪ್ರ ಕ ಟ ಣೆ

### ಹಳೆಯ ವಿದ್ಯಾರ್ಥಿ ಸಂಘ, ಶ್ರೀ ಸಿದ್ಧಗಂಗಾ ಮಠ.

ದಿನಾಂಕ **13-1-1991**ರ ಭಾನುವಾರ ಪ್ರಾತಃಕಾಲ 9 ಘಂಟೆಗೆ ಶ್ರೀ ಸಂಘದ ಸರ್ವಸದಸ್ಯರ ಸಭೆಯನ್ನು **ಪರಮ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರಮಹಾಸ್ವಾಮಿಗಳವರ** ದಿವ್ಯ ಅಧ್ಯಕ್ಷತೆಯಲ್ಲಿ ನಡೆಯುವಂತೆ ನಿಯೋಜಿಸಲಾಗಿದೆ. ಶ್ರೀ ಸಂಘದ ಹಳೆಯ ವಿದ್ಯಾರ್ಥಿಗಳೆಲ್ಲರೂ ಆಗಮಿಸ ಬೇಕಾಗಿ ಕೋರಲಾಗಿದೆ.

ಡಾ|| ಎಂ.ಎನ್. ಚನ್ನಬಸಪ್ಪ
ಕಾರ್ಯದರ್ಶಿ.

# ಸಿದ್ಧಗಂಗಾ

ಸಂಪುಟ-೨೬ ಸಂಚಿಕೆ-೧೨. ಡಿಸೆಂಬರ್-೧೯೯೦

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

" ಎಲೆತಂದೆ ಗುರುತಾಯೆ ಎಂಥ ಅದ್ಭುತ ನೀವು "
ನೆಲಕೆ ಮಂಗಲವಾಗಿ ಮೂಡಿರುವೆ। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

" ಸತ್ಯ ಶುಭ್ರಶ್ರೀಯೆ ಗಂಭೀರ ಪಾವನವೆ "
ನಿತ್ಯ ನಿರ್ಮಲ ಚರಿತ ಶ್ರೀಗುರುವೆ! ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

" ಪರಮ ಲಿಂಗೋಜ್ವಲವೆ ಶಿವಶ್ರೀ ಸೌಭಾಗ್ಯವೆ "
" ಶಿವಶಾಂತಿ ಸಾಗರವೆ" ಶ್ರೀಗುರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್. ವಿ. ವೀರಭದ್ರಯ್ಯ.



# ಶ್ರೀ ವಾಣಿ

ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಪರಮಾತ್ಮನ ಅಂಶವಿರುತ್ತದೆ. ಅಂತೆಯೇ ಅಸುರೀ ಅಂಶವೂ ಇರುತ್ತದೆ. Man is a mixture of bad and good ಎಂಬುದು ಅದಕ್ಕಾಗಿಯೇ. ತನ್ನಲ್ಲಿರುವ ಪರಮಾತ್ಮನ ಅಂಶವನ್ನು ಅರ್ಥಮಾಡಿಕೊಂಡು ವ್ಯಕ್ತಿ ಮುಂದುವರಿದಾಗ ಸುಸಂಸ್ಕೃತನಾಗುತ್ತಾನೆ. ಸುಸಂಸ್ಕೃತನಾಗುವುದು ಎಂದರೆ ತನ್ನಂತೆಯೇ ಲೋಕವೆಲ್ಲವನ್ನೂ ಪರಿಭಾವಿಸಿ, ಅದರಂತೆ ನಡೆದುಕೊಳ್ಳುವುದು ಎಂದರ್ಥ. ಇತರರಿಗೆ ನೋವಾಗದಂತೆ ಬದುಕುವುದು. ಅದನ್ನೇ ಭಗವಾನ್ ಬಸವಣ್ಣನವರು" ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ, ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲಸಂಗಮನೊಲಿಸುವ ಪರಿ" ಎಂದು ನುಡಿದಿದ್ದಾರೆ. ಈ ಸಪ್ತಶೀಲಗಳನ್ನು ಆಚರಣೆಯಲ್ಲಿಟ್ಟುಕೊಂಡು ಬಾಳುವುದೇ ಸುಸಂಸ್ಕೃತನ ಲಕ್ಷಣ. ವ್ಯಕ್ತಿ ತನ್ನಲ್ಲಿರುವ ವಾಕ್ ಶಕ್ತಿ, ವಿಚಾರಶಕ್ತಿ, ಕ್ರಿಯಾಶಕ್ತಿಗಳ ಸಂಪೂರ್ಣ ಸದುಪಯೋಗ ಮಾಡಿಕೊಳ್ಳಬೇಕು. ತನ್ನಲ್ಲಿ ಹರಿಯುವ ಈ ಪ್ರವಾಹಗಳನ್ನು ಸೂಕ್ತ ಸಮಯ ಸಂದರ್ಭಗಳಲ್ಲಿ ಬಳಸಿಕೊಳ್ಳುವ ಜಾಣ್ಮೆಯನ್ನು ರೂಢಿಸಿಕೊಳ್ಳಬೇಕು. ಲೋಕದಲ್ಲಿ ಉದಯವಾದ ಎಲ್ಲಾ ಧರ್ಮಗಳೂ ಬೋಧಿಸಿರುವ ತತ್ವ ಒಂದೇ. ಮಾನವ್ಯದ ಶ್ರೇಷ್ಠತೆಯನ್ನು, ಅಂಥ ಶ್ರೇಷ್ಠತೆ ಹಾಳಾಗದಂತೆ ಕಾಪಾಡಿಕೊಂಡು ಬರುವುದಕ್ಕಾಗಿ ವ್ಯವಸ್ಥಿತವಾದ ಸಂಸ್ಥೆಗಳನ್ನು ಪ್ರಾಚೀನ ಕಾಲದಿಂದಲೂ ರೂಪಿಸಿಕೊಂಡು ಬರಲಾಗಿದೆ. ಅಂಥ ಧರ್ಮ ಸಂಸ್ಥೆಗಳು, ದೇವಾಲಯ, ಬಸದಿ, ವಿಹಾರ, ಮಸೀದಿ, ಚರ್ಚುಗಳಾಗಿ ಉದಯವಾದವು. ಅಂತೆಯೇ ಮಠಮಾನ್ಯಗಳೂ ಬೆಳೆದು ಬಂದವು. ಧರ್ಮದ ದೀವಿಗೆ ನಂದಿಹೋಗದಂತೆ ಅರ್ಥಾತ್ ಮಾನವೀಯತೆ ಬತ್ತಿಹೋಗದಂತೆ ನೋಡಿಕೊಳ್ಳುವುದು ಮಠಗಳ ಕರ್ತವ್ಯವಾಯಿತು.

ಜೀವನ ಪರಿಪೂರ್ಣತೆಯನ್ನು ತುಂಬಿಕೊಳ್ಳುವುದಕ್ಕೆ ದುಡಿಯುವುದು, ಆತ್ಮಶಾಂ
ಯನ್ನು ತಂದುಕೊಳ್ಳುವ ಮಾರ್ಗವನ್ನು ತಿಳಿಸುವುದು, ಕಾಯಕದಲ್ಲಿ ತೊಡಗಿರುವುದು
ಸದ್ವರ್ತನೆ, ಸದಾಚಾರಗಳನ್ನು ಬೆಳೆಸಿಕೊಳ್ಳುವಂತೆ ನೋಡಿಕೊಳ್ಳುವುದು ಮುಂತಾ
ಸದ್ಗುಣಗಳನ್ನು ಬಿತ್ತಿ ಬೆಳೆಯುವುದೇ ಮಠಗಳ ಗುರಿ. ಜನಾಂಗ ಸುಸಂಸ್ಕೃರಾಗಲು
ಮಠಗಳು ಮಾಡುತ್ತ ಬಂದಿರುವ ಸೇವೆಯನ್ನು ಗಮನಿಸಬೇಕು. ಅದರಲ್ಲೂ ವೀರಶೈ
ಮಠಗಳು ಕರ್ನಾಟಕದಲ್ಲಿ ಜನತೆ ವಿದ್ಯಾವಂತರಾಗಲು ಶತಮಾನಗಳಿಂದ ಸಲ್ಲಿಸಿರು
ಸೇವೆಯನ್ನು ಮರೆಯುವಂತಿಲ್ಲ. ದನಿಯಿಲ್ಲದವರಿಗೆ ದನಿಕೊಟ್ಟ ಯಶಸ್ಸು ವೀರಶೈವ
ಮಠಗಳದ್ದು. ಹಿಂದೂ-ಮುಸಲ್ಮಾನ, ಹರಿಜನ-ಗಿರಿಜನರೆನ್ನದೆ ಸರ್ವಜನಾಂಗದ ಏಳಿ
ಗಾಗಿ ಸೇವೆಸಲ್ಲಿಸಿದ ವೀರಶೈವ ಮಠಗಳು ಗ್ರಾಮೀಣ ಜನತೆಯ ದೇವಮಂದಿರಗಳು
ಅಂಥ ವ್ಯವಸ್ಥೆಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಹೋಗುವುದು ಎಲ್ಲಕಾಲಕ್ಕೂ
ಅಪೇಕ್ಷಣೀಯವಾದುದು. ತನ್ನಲ್ಲಿ ಪರಮಾತ್ಮನ ಅಂಶವಿದೆ ಎಂಬುದರಿಂದ ಆರಂಭಗೊಂ
ವ್ಯಕ್ತಿಯ ಸಾಧನೆ ಕೊನೆಗೆತಾನೇ ಪರಮಾತ್ಮನಾಗಿದ್ದೇನೆ ಎಂಬ ವಿಧಾನವನ್ನು
ಶರಣಧರ್ಮ ಬೋಧಿಸುತ್ತದೆ. ಇಷ್ಟಲಿಂಗ ಮಾಧ್ಯಮದ ಮೂಲಕ ಅದನ್ನು ಅನು-
ಭವಕ್ಕೆ ತಂದುಕೊಡುತ್ತದೆ, ಜಗದಗಲ, ಮುಗಿಲಗಲ, ಮಿಗೆಯಗಲವಾದ ಆ ಪರವಸ್ತು
ಕರಸ್ಥಲಕ್ಕೆ ಬಂದು ಚುಳುಕಾದ ಪರಿಯನ್ನು ಬೋಧಿಸುತ್ತದೆ. ಮಠಗಳು ಹಾಗೆ ವ್ಯಕ್ತಿ-
ಎತ್ತರಕ್ಕೇರಲು ಸಹಾಯಕವಾಗುವ ಸಂಸ್ಥೆಗಳು. ಆದರೆ ತರುಣ ಜನಾಂಗ ಇಂದು
ಧರ್ಮ ಪ್ರವೃತ್ತಿಯಿಂದ ದೂರವಾಗುತ್ತ ನಡೆದಿರುವುದು ಶೋಚನೀಯ. ಧರ್ಮ-
ಪ್ರಜ್ಞೆ ಅಳಿಯಬಾರದು. ಅದರ ತಾಯಿಬೇರಾದ ನೈತಿಕತೆ ನಾಶವಾಗಬಾರದು.
ಹಾಗಾದರೆ ಉಪ್ಪು ತನ್ನ ಗುಣವನ್ನೇ ಕಳೆದು ಕೊಂಡಂತಾಗುತ್ತದೆ. ಆದಕ್ಕಾಗಿ
ಮಠಗಳ ಅಸ್ತಿತ್ವ ಅಗತ್ಯ.

(2-12-90ರಂದು ಮಾಗಡಿ ತಾಲ್ಲೂಕು, ಹುಲಿಕಲ್ ತೋಪಿನಮಠದ ಸಮಾರಂಭದ
ಮಾಡಿದ ಆಶೀರ್ವಚನದಿಂದ ಸಂಗ್ರಹಿಸಿದ್ದು)



# ಶ್ರೀ ಸಿದ್ಧಲಿಂಗೇಶ್ವರ ವಚನ.



ಕೋಡಗನ ಅಣಲಸಂಚಲದಲ್ಲಿ ಎರಡುದಾಡೆ ಹುಟ್ಟಿದವು ನೋಡಾ.
ಆದಾಡೆಯ ಸಂಚಲದಲ್ಲಿ
ಮೂರು ಲೋಕವೆಲ್ಲ ಅಳುತ್ತ ಮುಳುಗುತ್ತದೆ ನೋಡಾ.
ತ್ರೈಜಗದ ಮಸ್ತಕವನೊಡದು ನೀವು ಮೂಡಲು.
ಈರೇಳು ಲೋಕವೆಲ್ಲ ಬೆಳಗಾಯಿತ್ತು ನೋಡಾ.
ಈರೇಳು ಲೋಕವನೊಳಕೊಂಡ ಬೆಳಗುತಾನೆಂದರಿಯಲು
ಕೋಡಗನ ಅಣಲ ಸಂಚಲದ ದಾಡೆ ಮುರಿಯಿತ್ತು.
ಮೂರು ಲೋಕದ ವೇದನೆ ಮಾದುದ ಕಂಡೆನು ಕಾಣಾ
ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೇ

ಚಂಚಲ ಸ್ವಭಾವದ ಮನಸ್ಸೆಂಬ ಮರ್ಕಟನೆಗೆ ಪಾಪಪುಣ್ಯಗಳೆಂಬ ಎರಡು ದವಡೆಗಳು. ಅವುಗಳ ಮಧ್ಯದಲ್ಲಿ ಮೂರು ಲೋಕದ ಜೀವಿಗಳೆಲ್ಲರೂ ತೇಲುತ್ತಲಿದ್ದಾರೆ. ತನುತ್ರಯ ಸಂಬಂಧವಾದ ಜೀವತ್ರಯಗಳ ಭಿನ್ನಜ್ಞಾನವಳಿದು ಹದಿನಾಲ್ಕು ಇಂದ್ರಿಯಗಳೂ ಲಿಂಗಮಯವಾಗಿ ಬೆಳಗುತ್ತಿವೆ. ಆ ಇಂದ್ರಿಯಗಳಲ್ಲಿರುವ ಲಿಂಗ-ಭಾವದಿಂದ ತಾನೆ ಪರಬ್ರಹ್ಮವೆಂಬ ಭಾವನೆಬಲಿದು ಪಾಪ ಪುಣ್ಯರೂಪವಾದ ಪ್ರಾರಬ್ಧ ವಾಸನೆ ಕಳೆದು ಲಿಂಗಭೋಗಿಯಾಗಿದ್ದೇನೆಂಬ ಭಾವನೆಯುಂಟಾಗುತ್ತದೆ. ಅಂಥ ಲಿಂಗಭೋಗಿಯಾದ ಶರಣನ ತನುತ್ರಯ ಸಂಬಂಧವಾದ ಜೀವತ್ರಯ ಭಾವನೆ ಅಳಿದು ತ್ರಿವಿಧ ಲಿಂಗಸ್ವರೂಪಿಯಾಗಿ ಕಂಗೊಳಿಸುತ್ತಾನೆಂಬುದು ವಚನದ ಅರ್ಥ.

## ಸಿದ್ಧಗಂಗಾ

ಪ್ರಧಾನ ಸಂಪಾದಕರು
ಪ್ರೊ|| ಚನ್ನಪ್ಪ ಎರೇಸೀಮೆ

* * *

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಬಿ. ವೀರಭದ್ರಯ್ಯ
ಪಿ. ಎಸ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ವಿತರಣೆ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾಕ್ಷೇತ್ರ

### ಚಂದಾ ವಿವರ

ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 250-00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ: ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

ನಿಮ್ಮ ಹೆಮ್ಮೆಯ 'ಸಿದ್ಧಗಂಗಾ'ಕ್ಕೆ ಇಪ್ಪತ್ತಾರು ತುಂಬುತ್ತದೆ. ಈ ಸಂಪುಟದ ಈ ಸಂಚಿಕೆಯೊಂದಿಗೆ. ನಿಮ್ಮ ಅಭಿಮಾನ ಕಳೆದ ಕಾಲುಶತಮಾನದುದ್ದಕ್ಕೂ ವೃದ್ಧಿಯಾಗುತ್ತಲೇ ಬಂದಿದ್ದು ಪತ್ರಿಕೆಯ ಪ್ರಗತಿಗೆ ಕಾರಣವಾಗಿದೆ. ಈ ದೀರ್ಘಾವಧಿಯಲ್ಲಿ ಹಲವು ಹನ್ನೊಂದು ಬದಲಾವಣೆಗಳನ್ನು ಪತ್ರಿಕೆ ಕಂಡಿದೆ. ಬದಲಾವಣೆ ಬದುಕಿನ ಜೀವಂತ ಲಕ್ಷಣತಾನೆ? ದೇಶದ ಆಗುಹೋಗುಗಳಲ್ಲಿ ರಾಜ್ಯದ ಮುನ್ನಡೆಯಲ್ಲಿ ಎದ್ದುಕಾಣುವಂಥ ಬದಲಾವಣೆಗಳು ತಲೆದೋರಿವೆ. ಆದರೆ ಬದಲಾವಣೆ ಎಂಬುದು ದೀರ್ಘ ಚಿಂತನೆಯ, **ದೂರದರ್ಶಿ**ಯಾದ, ಸಮೃದ್ಧಭಾರತವನ್ನು ರೂಪಿಸುವಲ್ಲಿ ಎಷ್ಟುಪರಿಣಾಮಕಾರಿಯಾಗಿದೆಎಂಬುದನ್ನು ಆಲೋಚಿಸಿದರೆ ಕಾಣುವುದೇನು? ನಿರಾಶೆಯ ನಿಟ್ಟುಸಿರುಮಾತ್ರ. ಜನನಾಯಕರ ಚಟುವಟಿಕೆಗಳು ಎಂಥ ಆದರ್ಶವನ್ನು ಜೀವನಮೌಲ್ಯಗಳನ್ನು ಬಿತ್ತರಿಸುತ್ತಿವೆ? ನಿಷ್ಠೆ, ನಿಯತ್ತು, ದೇಶಭಕ್ತಿ ಮುಂತಾದುವುಗಳೆಲ್ಲ ಎಲ್ಲಿ ಹೋದವು? ಯಾವುದರತ್ತ ಮುಂದುವರಿಯುತ್ತಿದ್ದೇವೆ. ಯುವಜನಾಂಗದ ಮುಂದೆ ನಿರ್ಮಿಸುತ್ತಿರುವ "ಜೀವನ" ವಾದರೂ ಹೇಗಿದೆ? ಶ್ರದ್ಧೆ, ಶ್ರಮ, ಪ್ರಾಮಾಣಿಕತೆ, ಸಹಿಷ್ಣು ಭಾವಗಳಿಗೆಲ್ಲ ಎಳ್ಳುನೀರು ಬಿಡುವುದಕ್ಕೆ' ನಾಮುಂದು-ತಾಮುಂದು' ಎಂಬ ಸ್ಪರ್ಧೆ ನಡೆದಿದೆ ಎಲ್ಲೆಲ್ಲೂ. ಧರ್ಮದ ಬಗ್ಗೆ ತಿರಸ್ಕಾರದಿಂದ ಮಾತನಾಡುವ ಬುದ್ಧಿಜೀವಿಗಳಿದ್ದಾರೆ ಒಂದುಕಡೆ. ಧರ್ಮವನ್ನು ಸ್ವಾರ್ಥಸಾಧನೆಯ ಮೂಲಬಂಡವಾಳವನ್ನಾಗಿ ಮಾಡಿಕೊಂಡು ಮೇಲೇರುವ ರಾಜಕಾರಣಿಗಳಿದ್ದಾರೆ 'ಇನ್ನೊಂದು ಕಡೆ' 'ಧರ್ಮ'ವೆಂದರೆ 'ಅಲರ್ಜಿ'ಯಾಗುವ 'ಫ್ಯಾಷನ್' ಇಂದು' ಪಾರ್ಥೇನಿಯಂ'ನಂತೆ ಬೆಳೆಯುತ್ತಿದೆ. ಧರ್ಮದಯೆಯನ್ನು ಬೆಳೆಸುವ, ಮಾನವೀಯ ಮಹತ್ತು ಎಂಬುದನ್ನು ಗಮನಿಸಬಾರದೇಕೆ? ಮನುಷ್ಯಮನುಷ್ಯನಾಗಿ ಬಾಳುವುದನ್ನು ಧರ್ಮ ಬೋಧಿಸುತ್ತದೆ. ಜೀವನ ವಿಸ್ತಾರವನ್ನು ತೆರೆದು ತೋರಿಸುತ್ತದೆ. ಕೋಮುದಳ್ಳುರಿಯನ್ನುಂಟುಮಾಡಿ ಅಮಾಯಕ ಜೀವಗಳನ್ನು ಬಲಿಕೊಡುವುದರಲ್ಲಿ ಧರ್ಮವಿಲ್ಲವೆಂಬುದನ್ನು ತಿಳಿಯಬಾರದೇಕೆ? 'ಸರ್ವರಿಗೂ ಸಮಬಾಳು' ಎಂಬ ಮಂತ್ರ ಕೇವಲ ಭಿತ್ತಿಪತ್ರಗಳಿಗೆ, ಜಾಹಿರಾತುಗಳಿಗೆ ಆಕರ್ಷಕ ಘೋಷಣೆಯಾಗಿ ಉಳಿಯಬೇಕೆ? ಇದೆಲ್ಲವನ್ನೂ ಗಂಭೀರವಾಗಿ ಚಿಂತಿಸಲಾರದಷ್ಟು ಪ್ರಮಾತಮುಖಿಗಳಾಗುವತ್ತ

ಧಾಪಂತವೇಕೆ? ಸಾರ್ವಜನಿಕ ಸೇವಾವಕಾಶಗಳನ್ನು ಸ್ವಹಿತಾಸಕ್ತಿಯ ಏಣಿ-ಗಳನ್ನಾಗಿ ಮಾಡಿಕೊಳ್ಳುವ 'ದಂಧೆ'ಯಲ್ಲಿ ರಾಷ್ಟ್ರ ಕಲ್ಪನೆ ದೂರಸರಿದಿದೆ. ಹಿರಿಯರುಗಳಿಸಿಕೊಟ್ಟ ಅಮೂಲ್ಯಆಸ್ತಿಯನ್ನು ಸಂರಕ್ಷಿಸಿಕೊಳ್ಳುವ ಪ್ರಯತ್ನ ಪ್ರಾಮಾಣಿಕವಾಗಿ ನಡೆದಿದೆಯೆ? ಯೋಚಿಸುವವರಾದರೂ ಯಾರು? ಇದೆಲ್ಲಕ್ಕೆ ಪ್ರತಿಯೊಬ್ಬರೂ ಚಿಂತಿಸಿ ಮುಂದುವರಿಯೋಣ.

ಇನ್ನು

ಪತ್ರಿಕೆಯ ಪ್ರಗತಿಗೆ ಆರ್ಥಿಕ ಭದ್ರತೆ ಅತ್ಯಗತ್ಯ. ನಿಮಗೂ ಗೊತ್ತು. ಅದಕ್ಕಾಗಿ ಸಂಪೂರ್ಣ ನೆರವು ಇನ್ನಿಷ್ಟು ಬೇಕು. ಶ್ರೀಮಠದ ಹಳೆಯ ವಿದ್ಯಾರ್ಥಿಗಳಾದ ಕೆಲವರು ಚಂದಾದಾರರಾಗಿರುವುದು ತುಂಬಸಂತೋಷ ಆಗಿರದಿದ್ದಲ್ಲಿ ಈಗಲಾದರೂ ಮುಂದೆ ಬನ್ನಿ. ನಿಮ್ಮ ಪತ್ರಿಕೆ ಇದು. ನೀವೇ ಮುಂದೆ ಬರದಿದ್ದರೆ ಹೇಗೆ? ಆಜೀವ ಸದಸ್ಯರಾಗಿ. ಅದು ನಿಮ್ಮ ಪವಿತ್ರ ಕರ್ತವ್ಯ. ನಿಮ್ಮಬದುಕಿಗೆ ನೀರೆರೆದು ಪೋಷಿಸಿದ ಸಂಸ್ಥೆಯ ಸರ್ವಕಾರ್ಯಕ್ರಮ-ಗಳಲ್ಲಿಯೂ ನಿಮ್ಮ ಸಹಕಾರ ಸಕ್ರಿಯವಾಗಿ ಕೂಡಿಬರಲಿ. ಅಂಥಸದ್ಭಾವನೆ ನಿಮ್ಮಲ್ಲಿದೆ ಎಂದು ಪತ್ರಿಕೆ ಭಾವಿಸುತ್ತದೆ. ಅಂತೆಯೇ ಶ್ರೀಮಠದ ವಿದ್ಯಾ ಸಂಸ್ಥೆಗಳಲ್ಲಿ–ಶಾಲಾ ಕಾಲೇಜುಗಳಲ್ಲಿ ಸಹಸ್ರಾರು ಉದ್ಯೋಗಿಗಳಿದ್ದಾರೆ. ಅವರೆಲ್ಲರೂ 'ಸಿದ್ಧಗಂಗಾ'ಕ್ಕೆ ಚಂದಾದಾರರಾಗುವುದು ಅಭಿಮಾನದ ಸಂತೋಷ ವಿಚಾರವೆಂದು ಪತ್ರಿಕೆ ಸ್ವಾಗತಿಸುತ್ತದೆ. ಪ್ರತಿಭಾವಂತಲೇಖಕರಿದ್ದಾರೆ ಅವರಲ್ಲಿ. ಅಂಥವರು ಮುಕ್ತವಾಗಿ ಸಹಕರಿಸುತ್ತ ಬಂದಿದ್ದಾರೆ. ಈಸಂದರ್ಭದ ಅವರನ್ನು ಸ್ಮರಿಸುವುದು ಕರ್ತವ್ಯ 'ಸಿದ್ಧಗಂಗಾ'ಕ್ಕೆ.

ಮತ್ತೆ

ಸಿದ್ಧಗಂಗಾ ಇಪ್ಪತ್ತಾರು ವರ್ಷಗಳು ನಿರಂತರವಾಗಿ ನಡೆದುಬಂದ ಸಂದರ್ಭದಲ್ಲಿ ಕರ್ನಾಟಕ ರಾಜ್ಯ ಪತ್ರಿಕಾ ಅಕಾಡೆಮಿಯಿಂದ ಪ್ರಶಸ್ತಿಯನ್ನು ಪಡೆದಿದೆ. ಈಏಳಿಗೆಯಲ್ಲಿ ಸಹಕರಿಸಿದ ಲೇಖಕರಿಗೆ,ಜಾಹಿರಾತುದಾರರಿಗೆ, ಸಂಪಾದಕಪ್ರಧಾನರಿಗೆ, ಸಂಪಾದಕ ಮಂಡಳಿಯವರಿಗೆ, ಸಲಹಾ ಸಮಿತಿ ಸದಸ್ಯರಿಗೆ, ಅಚ್ಚುಕೂಟದವರಿಗೆ, ಪ್ರಕಾಶಕರಿಗೆ, ಕೃತಜ್ಞತಾಪೂರ್ವಕ ವಂದನೆಗಳು.

ಸಿದ್ಧಗಂಗಾ



# ರಾಜ್ಯ ಪ್ರಶಸ್ತಿ ವಿಜೇತ ಶ್ರೀ ಆರ್. ಎಂ. ಬಿ. ಆರಾಧ್ಯ

ಯಾವ ಮೊಗ್ಗಿನಲ್ಲಿ ಎಂಥ ಸೌರಭವಿರುತ್ತದೋ ಅರಳಿದಾಗಲೇ ಗೊತ್ತಾಗುವುದು ಹಕ್ಕಿ ಹಾಡಿದಾಗಲೇ ನಾದದ ಇಂಪು ಅರಿವಾಗುವುದು. ಮೊಳಕೆ ದಾಗಲೇ ಕಾಳುದೃಢವಾಗುವುದು. ಆದರೆ ಮೊಗ್ಗು ಅರಳಲು, ಹಕ್ಕಿ ಹಾಡಲು, ಮೊಳಕೆ ಬೆಳೆಯಲು ಬೆಳೆ- ಉತ್ತಮ ಪರಿಸರ ಮುಖ್ಯ. ಮಾರ್ಗದರ್ಶನ ಕೃಪಾಮೂರ್ತಿ ಅಗತ್ಯ. ಶ್ರೀ ಸಿದ್ದಗಂಗಾಮಠದ ಪರಿಸರದಲ್ಲಿ ಅರಳಿದ, ಕೃಪಾಮೂರ್ತಿಯ ಕಾರುಣ್ಯ ಕ್ಕೊಳಗಾದ ಅದೆಷ್ಟು ಪುಣ್ಯ ಜೀವಿಗಳಿಂದು ರಾಷ್ಟ್ರ ಜೀವನದ ನಿರ್ಮಾಣದಲ್ಲಿ ವಿನಮ್ರ ಸೇವೆಸಲ್ಲಿಸುತ್ತಿವೆ. ಯಾವುದೇಒಂದು ಸ್ಥಳವನ್ನು ವ್ಯಕ್ತಿಯನ್ನು, ಸುಮ್ಮನೆ ನೋಡಿದರೆ ಆಗುವುದಿಲ್ಲ. 'ಕಾಣುವ ಆಂತರಿಕ ಪರಿಭಾವನೆ ಮುಖ್ಯ. ಸಿದ್ಧಗಂಗಾ ಪವಿತ್ರ ವಾತಾವರಣದಲ್ಲಿ ಅರಳಿದ ಸೇವಾನಿಷ್ಠ ಸಜ್ಜನ ಶ್ರೀ ಆರ್.ಎಂ ಬಿ. ಆರಾಧ್ಯ ಬೆಳೆದು ಬಂದದ್ದು ಕುತೂಹಲಕಾರಿಯಾಗಿದೆ. ಸ್ವನಿರ್ಮಿತವ್ಯಕ್ತಿ ಅವರು.

ಹುಟ್ಟಿದ್ದು ಗೊಟ್ಟಿಗೆರೆ. ಬೆಂಗಳೂರು ಜಿಲ್ಲೆ. ಸದ್ಭಕ್ತ ದಂಪತಿಗಳು ಹೆತ್ತವರು ರುದ್ರಯ್ಯ ರುದ್ರಮ್ಮ ಸಾತ್ವಿಕತೆಯ ಪ್ರತಿಮೆತ್ತು ಒಂದಂತೆ ಅವರ ಬಾಳು ಜೀವನ ನಿರ್ವಹಣೆಗಾಗಿ ಕೈಗೊಂಡದ್ದು ವ್ಯಾಪಾರ. ಶ್ರೀಮಂತಿಕೆಯಿಲ್ಲದಿದ್ದರೂ ಸಂತೃಪ್ತ ಬದುಕು. ಪಟೇಲಿಕೆ ಬೇರೆ. ಪರಿಣಾಮವಾಗಿ ಸುತ್ತ ಹತ್ತು ಹಳ್ಳಿಯ ಜನಕ್ಕೆ ಬೇಕಾದ ವ್ಯಕ್ತಿ. ಗುರುಲಿಂಗಜಂಗಮ ರಲ್ಲಿ ಅಪಾರ ಭಕ್ತಿ. ಶ್ರೀ ಅರ್. ಎಂ. ಬಿ. ಆರಾಧ್ಯರು ಪೂರ್ಣ ಹೆಸರು-ತಂದೆತಾಯಿಗಳಿಟ್ಟ ರುದ್ರಾರಾಧ್ಯ ಮುದ್ದು ಬಸವಾರಾಧ್ಯ.

ಶ್ರೀ ಆರಾಧ್ಯರು ಶ್ರೀ ಸಿದ್ದಗಂಗಾ ಮಠಕ್ಕೆ ಪ್ರೌಢಶಿಕ್ಷಣಕ್ಕಾಗಿ ಬಂದರು. ಪೂಜ್ಯ ಉದ್ದಾನ ಶಿವಯೋಗಿಗಳವರ ಕೃಪಾಕಟಾಕ್ಷಕ್ಕೆ ಬಂದರು. ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಅನುಗ್ರಹಕ್ಕೆ ಪಾತ್ರರಾದರು, ಪರಿಣಾಮವಾಗಿ ಶಿಸ್ತು ಸಂಯಮಗಳ ಮಾರ್ಗಾನುಯಾಯಿಯಾದರು. ಸುಸ್ನೇಹಿ ಯಾದ ಆರಾಧ್ಯರ ಗೆಳೆಯರ ಬಳಗವೂ ಶ್ರೀಮಠದಲ್ಲಿ ದೊಡ್ಡದಾಗಿತ್ತು. ಶ್ರೀ ಸಿದ್ದಗಂಗಯ್ಯ, ಶ್ರೀ ಸಿ.ಬಿ. ಶಂಕರಪ್ಪ, ಬಿ.ಟಿ. ತಿಮ್ಮಯ್ಯ, ಮುಂತಾದ ಒಡನಾಡಿಯಾಗಿ, ಒಡಗೂಡಿ ಬೆಳೆದರು. ಗುರುಕುಲದಲ್ಲಿ ವೇದ. ಸಂಸ್ಕೃತ ಅಧ್ಯಯನ ಮಾಡಿದರು. ಪ್ರೌಢ ಶಿಕ್ಷಣ ಮುಗಿಸಿದ ಮೇಲೆ ಸ್ವಗ್ರಾಮಕ್ಕೆ ತೆರಳಿದರು. ಗುರುಕುಲ ಕೊಟ್ಟ ಸಂಸ್ಕಾರ ಅವಕಾಶಕ್ಕಾಗಿ ಕಾಯುತ್ತಿತ್ತು.

ಶಿಕ್ಷಕರಾಗಿ ವೃತ್ತಿ ಜೀವನ ಪ್ರಾರಂಭ ಅಷ್ಟೇ ಶೀಘ್ರ ಅದಕ್ಕೆ ವಿದಾಯ. ಸ್ವತಂತ್ರ ಮನೋ ಧರ್ಮ ಬೆಂಗಳೂರಿನಲ್ಲಿ ಖಾಸಗಿ ಉದ್ಯಮ. ಅಭಿವೃದ್ಧಿ ಪಥಕ್ಕೆ ಹಗಲಿರುಳು ದುಡಿಮೆ. ಸಿದ್ಧಗಂಗಾ ಶ್ರೀಗುರು ಕಲಿಸಿದ ಪಾಠ ದುಡಿಮೆಯೊಂದೇ ಪ್ರಗತಿಗೆ ಹೆದ್ದಾರಿ ಎಂಬ ಗುಟ್ಟು ತಿಳಿಯಿತು. ಏಣಿ ಹತ್ತುತ್ತ ಬಂದರು. ಅನುಭವ ಶ್ರೀಮಂತಿಕೆಯೊಂದಿಗೆ 'ಕಂಟ್ರಾಕ್ಟರ್' ಕ್ಷೇತ್ರಕ್ಕೆ ಪ್ರವೇಶ ಅಲ್ಲಿಯೂ ಜನಪ್ರಿಯತೆ. ಯಶಸ್ಸಿನ ಮಾಲೆ. ನಿವೇಶನಾಭಿವೃದ್ಧಿ ಉದ್ಯಮ ಅದರಲ್ಲೂ ದಾಪುಗಾಲು

ಗಾಂಧೀ ಪ್ರಭಾವಕ್ಕೆ ಒಳಗಾದವರಲ್ಲಿ ಆರಾಧ್ಯರೂ ಒಬ್ಬರು ಬಾಪೂವಿನ ಆದರ್ಶ ಜೀ ಬಗ್ಗೆ ಆಸಕ್ತಿ. ಪರಿಣಾಮವಾಗಿ ಗೊಟ್ಟಿಗೆರ ಹರಿಜನ ಓಣಿ ಕೇರಿಗಳ ಅಭಿವೃದ್ಧಿ. ರಚನಾ ಕಾರ್ಯಕ್ರಮಗಳಲ್ಲಿ ಸಂಪೂರ್ಣ ಮಗ್ನರಾದ ಆರಾಧ್ಯರಿಗೆ ಜನಬೆಂಬಲ. ಸಾರ್ವಜನಿಕ ಕ್ಷೇತ್ರ ನಿಸ್ವಾರ್ಥವಾಗಿ ದುಡಿವ ಪ್ರವೃತ್ತಿ. ಸಂಘ ಸಂಸ್ಥೆಗಳ ಸಂಪರ್ಕ. ಹಲವಾರು ವಿದ್ಯಾರ್ಥಿ ಬಾಳಿಗೆ ರೂವಾರಿಯಾದ ಆತ್ಮ ಸಂತುಸ್ಟಿ. ಅಂಥರ ಅಂಗವಿಕಲರ ಬಾಳಿನ ಆರಾಧ್ಯಮೂರ್ತಿ ಮೂಡಿಬಂದ ಆರಾಧ್ಯರಿಗೆ ಮಠಮಾನ್ಯಗಳ ಸೇವೆ ಸಲ್ಲಿಸುವ ಸದವಕಾಶ. ಸರ್ಪಭೂ ಮಠದ ಧರ್ಮದರ್ಶಿ, ಮಠದ ಅಭಿವೃದ್ಧಿಯಲ್ಲಿ ಆರಾಧ್ಯರ ಪಾತ್ರಹಿರಿದು. ವಹಿಸಿಕೊಂಡ ಹುದ್ದೆಗೆ ಘನತೆ ತಂದುಕೊಟ್ಟ ಕೀರ್ತಿ. ಕುರುಡರಿಗೆ ಕಣ್ಣಾಗಿ ಅರಳಿದ ಪುಣ್ಯವಂತ ಡಾ॥ ಎಂ. ಮೋದಿ. ಸಮಾಜದ ಅಮೂಲ್ಯ ಆಸ್ತಿ. ಪದ್ಮಶ್ರೀ ವಿಜೇತ. ನೇತ್ರತಜ್ಞ ಜಗತ್ತಿನ ಧ್ರುವ ಅಂಥವರ ಶಿಬಿರಗಳಲ್ಲಿ ಸಂತೋಷದಿಂದ ಸೇವೆ ಮಾಡಿದ ಭಾಗ್ಯ ಆರಾಧ್ಯರಿಗೆ. ಪರಸೇವೆ ಪರಮಾತ್ಮನಿದ್ದಾನೆ ಎಂಬ ಸಿದ್ಧಗಂಗಾ ಗುರುಕುಲದ ಮಂತ್ರನಿಷ್ಠೆ. ಅಂಥವರ ಅಭಿವೃದ್ಧಿಗ ದುಡಿದು ಬೆಳ್ಳಿಬಹ್ಬ ಆಚರಿಸಿದ ಆನಂದ. ಆರ್ಥಿಕ ಸಮಿತಿಯ ಅಧ್ಯಕ್ಷತೆ.

ಸಮಾಜದ ಪುರೋಭಿವೃದ್ಧಿಗಾಗಿ ಕ್ರಿಯಾಶೀಲ ಸಹಕಾರ. ಅಖಿಲ ಭಾರತ ವಿ ಶೈವ ಮಹಾಸಭೆಯ ಮಹಾಪೋಷಕ, ಉಪಾಧ್ಯಕ್ಷ. ಚಿತ್ರದುರ್ಗದ ಪಂಚಾಚಾರ್ಯ ಕಲ್ಯಾ ಮಂಟಪದ ಧರ್ಮದರ್ಶಿ, ಎಸ್.ಜೆ.ಎಂ. ಕಾಲೇಜಿನ ಕಾರ್ಯಕಾರಿಮಂಡಳಿಯ ಸದಸ್ಯ, ರೆ ಕ್ರಾಸ್ ಸಂಸ್ಥೆ, ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆ, ಭಾರತ ಸೇವಕ ಸಮಾಜ, ಕೈಗಾರಿ ಗೃಹ ನಿರ್ಮಾಣ ಸಂಘ, ಲೋಕವಾಣಿ ಪತ್ರಿಕೆಯ ಸಲಹಾಮಂಡಳಿ ಕಿದ್ವಾಯಿ, ಕ್ಯಾನ್ಸ ಸಂಸ್ಥೆ, ಅಕ್ಕಮಹಾದೇವಿ ಸಮಾಜ, ಶರಣ ಸೇವಾ ಸಮಾಜಗಳ ಸಂಪರ್ಕ ಇಟ್ಟುಕೊಂಡಿರು ಶ್ರೀ ಆರಾಧ್ಯರು ಪ್ರಾಮಾಣಿಕತೆಗೆ ಹೆಸರಾಗಿದ್ದಾರೆ.

ಆರಾಧ್ಯರು ಸಾಹಿತ್ಯಾಭಿಮಾನ ದೊಡ್ಡದು. ಸಾಹಿತಿಗಳ ಬಗ್ಗೆ ಅಪಾರಗೌರವಭಾವ ಅನೇಕ ಗ್ರಂಥಗಳ ಪ್ರಕಟಣೆಗೆ ಆರ್ಥಿಕಸಹಾಯ ಮಾಡಿದ್ದಾರೆ. ಸಾಹಿತಿಗಳ ಸನ್ಮಾನ ಸಮ ಸಮಾರಂಭಗಳಲ್ಲಿ ಸಾಮಾನ್ಯ ಕಾರ್ಯಕರ್ತರಂತೆ ದುಡಿಯುತ್ತ, ಆರ್ಥಿಕ ಜವಾಬ್ದಾರಿಯನ ವಹಿಸಿಕೊಂಡು ಸೇವೆಗೆ ಪ್ರತಿಫಲ ನಿರೀಕ್ಷಿಸದ ಅಪರೂಪದ ಉದಾಹರಣೆ.

ಧರ್ಮಸಂಸ್ಥೆಗಳ ವಿಚಾರದಲ್ಲಿ ಶ್ರದ್ಧೆ ಮಠಾಧಿಪತಿಗಳಲ್ಲಿ ಭಕ್ತಿ, ಸಿದ್ಧಗಂಗಾ, ಸುತ್ತೂ ಸಿರಿಗೆರೆ, ಚಿತ್ರದುರ್ಗ ಮಠಗಳ ಧಾರ್ಮಿಕ ಸಮಾರಂಭಗಳಲ್ಲಿ ಸಕ್ರಿಯ ಸೇವಾರ್ಪಣೆ.

ದಾಂಪತ್ಯದಲ್ಲಿ ಆದರ್ಶ ಸಾಧಿಸಿದ ಆರಾಧ್ಯರಿಗೆ ಎರಡು ಗಂಡು, ಒಂದು ಹೆಣ್ಣು ಮನೆ ಮನ ತುಂಬಿದ ಸತಿ 'ಸುಕನ್ಯ' ಅನುಕೂಲಕರವಾಗಿ ಪತಿಯೊಂದಿಗೆ ಹೆಜ್ಜೆಯಿಡು ಮನೋಧರ್ಮಿಗಳು. ಬದುಕಿನಲ್ಲಿ ಸುಖದುಃಖಗಳನ್ನು ಸಮಭಾವದಿಂದ ಸ್ವೀಕರಿಸು ಶ್ರೀ ಆರಾಧ್ಯರು 'ಶಿವಸೃಷ್ಟಿ' ಎಂಬ ಭಾವನಿರ್ಲಿಪ್ತರು ಕರ್ನಾಟಕ ರಾಜ್ಯ 1990 ರಾಜ್ಯೋತ್ಸವ ಸಂದರ್ಭದಲ್ಲಿ ಶ್ರೀ ಆರ್. ಎಂ. ಬಿ. ಆರಾಧ್ಯರಿಗೆ ರಾಜ್ಯಪ್ರಶಸ್ತಿ ನೀ ಗೌರವಿಸಿದೆ. ಶ್ರೀಯುತರು ಮಾಡಿದ ಸಮಾಜ ಸೇವೆಗೆ ಪ್ರಶಸ್ತಿ ಸಂದ ಈ ಸಂದರ್ಭದ ಶ್ರೀ ಮಠದ ಹಳೆಯ ವಿದ್ಯಾರ್ಥಿಗಳಾದ ಶ್ರೀ ಆರಾಧ್ಯರಿಗೆ 'ಸಿದ್ಧಗಂಗಾ' ತುಂ ಹೃದಯದ ಅಭಿನಂದನೆಗಳನ್ನು ಅರ್ಪಿಸಲು ಸಂತೋಷಿಸುತ್ತದೆ.

# ಲಾಂಛನಕ್ಕೆತಕ್ಕ ಆಚಾರವಿಲ್ಲದಿದ್ದರೆ.

ಧನರಾಜ ಪುಲಾರೆ ಗುಲಬರ್ಗ, ಎಂ.ಎ. ಡಿಪ್. ಇನ್ ಬಿ.ಎಸ್.,

ಲಾಂಛನಕ್ಕೆತಕ್ಕ ಆಚಾರವಿಲ್ಲದಿದ್ದರೆ ಕೂಡಲಸಂಗಮದೇವಾ ನೀಸಾಕ್ಷಿಯಾಗಿ ಛೀ ಎಂಬೆ. ಇದು ಬಸವೇಶ್ವರರ ಒಂದು ವಚನದ ಮಧ್ಯೋಕ್ತಿಯ ವಾಕ್ಯವಿದೆ. ಬಸವೇಶ್ವರರು ಲಾಂಛನಧಾರಿಗಳನ್ನು ( ಜವಾಬ್ದಾರಿ ಹೊತ್ತ ವೇಷಭೂಷಣ ) ಧಾರಿಗಳು) ಕುರಿತು ಸೂಕ್ಷ್ಮಾತಿ ಸೂಕ್ಷ್ಮವಾಗಿ ವಿಮರ್ಶೆಗೆ ಇಲ್ಲಿ ಗುರಿಪಡಿಸಿದ್ದಾರೆ. ಮುಖವಾಡದ ಲಾಂಛನಗಳ ಧ್ಯೇಯಧೋರಣೆಗಳ ಮೌಲ್ಯಗಳಂತೆಯೇ ನಿಜಜೀವನದಲ್ಲಿಯೂ ಸಹ ಪ್ರತ್ಯಕ್ಷಿಕವಾಗಿರಬೇಕೆಂಬುದು ಬಸವೇಶ್ವರರ ಅಸ್ಖಲಿತ ನಿರ್ಣಯವಾಗಿದೆ.

ಲಾಂಛನ ಧಾರಿಗಳು ಗುರುತ್ವೀಕರಣ ( Identification ) ಕ್ಕಾಗಿ ಲಾಂಛನ, ಧರಿಸಿ ಏನೆಲ್ಲ ಕಪಟನಾಟಕವಾಡುವುದು ಬಸವೇಶ್ವರರ ದೃಷ್ಟಿಗೆ ಸರಿಕಾಣದು. ಸ್ವಾಮಿಯಿರಲಿ, ಸಂನ್ಯಾಸಿಯಿರಲಿ, ಭೈರಾಗಿಗಳಿರಲಿ, ರಾಜಕಾರಣಿಗಳಿರಲಿ, ಮಂತ್ರಿಯಿರಲಿ. ಯಾವ ವ್ಯಕ್ತಿಗಳಿದ್ದರು ಅವರವರ ಲಾಂಛನದ ಅಂತರಾಳದ ಕರ್ತವ್ಯ ನಿಷ್ಠತೆಗೆ ಬದ್ಧರಾಗಿರಬೇಕೆನ್ನುತ್ತಾರೆ. ಲಾಂಛನದ ಕರ್ತವ್ಯ ಚ್ಯುತಿಯಾದಲ್ಲಿ ಬಸವೇಶ್ವರರು ಕೂಡಲಸಂಗಮದೇವರ ( ಸತ್ಯಸತ್ವದ ) ಸಾಕ್ಷಿಯಾಗಿ ಛೀಮಾರಿ ಹಾಕುತ್ತಾರೆ.

ಲಾಂಛನಧಾರಿಗಳು ತಮ್ಮ ಲಾಂಛನದ ಅಪ ಮೌಲೀಕರಣಗೊಳಿಸಿ ಸ್ವಾರ್ಥದ ಪರಾಕಾಷ್ಠೆಗೆ ಬೆನ್ನು ಹತ್ತಿ ವ್ಯಕ್ತಿ ಹಾಗೂ ಸಮಷ್ಠಿ ಶೋಷಣೆಗಾರರಾಗುವುದನ್ನು ಖಂಡಿಸುತ್ತಾರೆ ಮತ್ತು ದಂಡಿಸುತ್ತಾರೆ. ಮಾನದಂಡನೆಯ ಉಪಾಯದಿಂದ ಲಾಂಛನಗಳ ಕರ್ತವ್ಯಚ್ಯುತಿಗೆ ತಾರಕ ಚೇತನರಾಗುತ್ತಾರೆ.

ಬಸವೇಶ್ವರರು ತಮ್ಮ ಸಮಕಾಲೀನ ಪರಿಸರದಲ್ಲಿ ದೇವರ ಹೆಸರಿನಲ್ಲಿ ದೃಷ್ಟ ಶಕ್ತಿಗಳ ಹೆಸರಿನಲ್ಲಿ ಲಾಂಛನಧಾರಿಗಳಾಗಿ ಜನತೆಯನ್ನು ಶೋಷಿಸುವ ಪದ್ಧತಿಯನ್ನು ಕುರಿತು ಚಿಂತನಮಾಡಿ ತಮ್ಮ ನಿಷ್ಠೂರ ನಿಲುವನ್ನು ತಮ್ಮ ಅನುಭವದಲ್ಲಿ ಪ್ರತಿಪಾದಿಸಿದ್ದಾರೆ. ಬಹುಷ್ಯ ಅಂದು ಇಂದು ಜನತೆಯನ್ನು ಸರ್ವವಿಧದಿಂದಲೂ ಶೋಷಿಸುವ ಪೂಜಾರಿಗಳು, ಪುರೋಹಿತರು, ಸಾಧುಗಳು, ಸನ್ಯಾಸಿಗಳು, ಮಾಂತ್ರಿಕರು ಶೋಷಣೆ ಮಾಡುವ ವರ್ಗದ ಕುರಿತಾಗಿಯೇ ಬಸವೇಶ್ವರರು ಚಿಂತಿಸಿರಬೇಕು.

ಜನತೆಯನ್ನು ಅಜ್ಞಾನ ಮಾರ್ಗದಲ್ಲಿ ಮುನ್ನಡೆಸಿ ಹಲವಾರು ಜೀವನ ಮುಖಗಳಿಂದ ಶೋಷಣೆ ಮಾಡುವ ಲಾಂಛನಧಾರಿಗಳ ಮನೋಭಾವಕ್ಕೆ ಬಸವೇಶ್ವರರು ಸತ್ವಪರೀಕ್ಷೆಗೆ ಗುರಿಪಡಿಸಿದ್ದಾರೆ. ಲಾಂಛನಧಾರಿಗಳ ಮೂಲಭಾವದ ತತ್ವಮೌಲ್ಯಗಳ

ಅಪಮೌಲಿಕರಾದಕರ್ತವ್ಯಕ್ಕೆ ಬಸವೇಶ್ವರರು ಪ್ರತಿ ಬಂಧಿಸುತ್ತಾರೆ. ನಿಜಕರ್ತವ್ಯ ಪಂಧಿಯನ್ನು ಹರಿದು ವಿಮುಖಗೊಳಿಸಿ ಜೀವನ ಸಾಗಿಸುವ ಲಾಂಛನದಾರಿಗಳ ಮನೋವೃತ್ತಿಗೆ ಕಡಿವಾಣ ಹಾಕುತ್ತಾರೆ. ಲಾಂಛನಧಾರಿಗಳ ಕರ್ತವ್ಯ ಪ್ರಜ್ಞೆಯ ಶಿಥಿಲಥೆಯನ್ನು ಬಸವೇಶ್ವರರು ಎಚ್ಚರಿಸುತ್ತಾರೆ.

ಯಾವುದೆ ಲಾಂಛನಧಾರಿಗಳ ಕರ್ತವ್ಯದ ಹಿಂದೆ ಮಾನವೀಯತೆ, ಅಪರಿಮಿತ ಕರ್ತವ್ಯರೂಢಿಸುವ ಪ್ರಮೇಯ ಅಡಗಿರುತ್ತದೆ. . ಅದನ್ನು ಅಜ್ಞಾನ ಹಾಗೂ ಸ್ವಾರ್ಥದ ಗೋಡೆಗಳ ನಿಶೆಯ ಹಿಂಬಾಲಕರಾಗಿ ಲಾಂಛನಧಾರಿಗಳು ತಮ್ಮ ಮೂಲಭೂತ ಕರ್ತವ್ಯ ಪ್ರಜ್ಞೆಯಿಂದ ವಂಚಿತರಾಗುತ್ತಾರೆಂಬುದು ಬಸವೇಶ್ವರರ ಅಭಿಮತವಾಗಿದೆ. ಅದಕ್ಕಾಗಿಯೆ ಬಸವೇಶ್ವರರು "ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ ಸತ್ಯತತ್ವದ ಮೇಲೆ ಅಣೆಯಿಟ್ಟು ಛೀ ಎಂಬೆ" ಎಂದು ಛೀಮಾರಿ ಹಾಕಿ ಲಾಂಛನ-ದಾರಿಗಳ ಅಂತರಂಗದ ಮನೋಭಾವಕ್ಕೆ ಭಾವವೇದ್ಯರಾಗುತ್ತಾರೆ.

ಒಂದರ್ಥದಲ್ಲಿ ಬಸವೇಶ್ವರರು ಭಕ್ತಿಯ ಆಗರ. ಭಂಡಾರಿ ಎಂದೇ ಭಾವು-ಕತೆಯಿಂದ ಗೌರವ ಸಲ್ಲಿಸುವ ಪರಿಪಾಠ ನಮ್ಮಲ್ಲಿದೆ. ಬಸವೇಶ್ವರರ ಲಾಂಛನಧಾರಿ ಡಾಂಭಿಕ ಪ್ರವೃತ್ತಿಯು ಜನತೆಯನ್ನು ಅಂತರಂಗಿಕವಾಗಿ ಎಚ್ಚರಿಸುವ ಗಣಾಚಾರ ಮನೋಭಾವ ಧರ್ಮಚಿಂತನೆಯು ಸೂಕ್ಷ್ಮತೆಗೆ ಹಿಡಿದ ಕನ್ನಡಿಯಾಗಿದೆ.

ಯಾವುದೇ ತರಹದ ಲಾಂಛನಧಾರಿಗಳು ತಮ್ಮ ಕರ್ತವ್ಯವನ್ನು ಅಪಮೌಲೀ ಕರಣಗೊಳಿಸದೆ ಕರ್ತವ್ಯವೇ ದೇವರೆಂದು ಅರಿತು ಅದರಂತೆ ನಿಜ ಜೀವನದಲ್ಲಿ ಕರ್ತವ್ಯ ಹೃದಯದಿಂದ ವ್ಯಕ್ತಿ ಮತ್ತು ಸಮಷ್ಠಿ ಜೀವನದಲ್ಲಿ ಸಮರಸಭಾವ ಮೂಡಿ ಸುವುದು ಬಸವೇಶ್ವರರ ಧರ್ಮಸಂವಿಧಾನ ಒಂದು ಪರಿಚ್ಛೇದನವಾಗಿದೆ.

[ ಕೃಪೆ. ಬಸವಭಾನು. ]

-: ಜ ಯ ಬ ಸ ವ ಶ ರ ಣಾ ರ್ಥಿ :-

# ಬಸವ ವಚನಾಮೃತ

ಡಾ|| ಎಲ್. ಬಸವರಾಜು, ಮೈಸೂರು.

ಮಾಡಿದೆನೆಂಬುದು ಮನದಲ್ಲಿ ಹೊಳೆದರೆ
ಏಡಿಸಿ ಕಾಡಿತ್ತು ಶಿವನ ಡಂಗುರ
ಮಾಡಿದೆನೆನ್ನದಿರಾ ಲಿಂಗಕ್ಕೆ
ಮಾಡಿದೆನೆನ್ನದಿರಾ ಜಂಗಮಕ್ಕೆ
ಮಾಡಿದೆನೆಂಬುದು ಮನದಲಿಲ್ಲದಿರೆ
ಬೇಡಿದನೀವ ನಮ್ಮ ಕೂಡಲಸಂಗಮದೇವ।

ಕಳ್ಳನು ಮಾಡಬಾರದುದನ್ನು ಮಾಡಿ ಮುಚ್ಚಿಕೊಳ್ಳುತ್ತಾನೆ. ಸಭ್ಯನೆಂಬುವನು ಮಾಡ ಬೇಕಾದುದನ್ನು ಮಾಡಿ ಕೊಚ್ಚಿ ಕೊಳ್ಳುತ್ತಾನೆ. ಕಳ್ಳನು ಮುಚ್ಚಿಕೊಳ್ಳುವುದು ಸರಿಯೇ ಅದು ಮಾಡಬಾರದು! ಸಭ್ಯನು ಕೊಚ್ಚಿಕೊಳ್ಳುವುದಂತೂ ಅಕ್ಷಮ್ಯ. ಏಕೆಂದರೆ ಅವನು ತನ್ನ ಕರ್ತವ್ಯವನ್ನು ಮಾತ್ರ ಮಾಡಿ ಮುಗಿಸಿದ್ದಾನೆ. ಅದಕ್ಕೇಕೆ ಬಡಾಯಿ? ಸಭ್ಯನ ಆ ಬಡಾಯಿಯಲ್ಲಿ ತನಗಿಂತ ಅನ್ಯನಾದವನು ಬಡಪಾಯಿ, ಅವನಿಂದ ಆಗದಿರುವುದನ್ನ ನಾನು ಮಾಡಿರುವೆನೆಂಬ ಅನ್ಯಾಯಪಮಾನಕಾರಕ ಮಿಥ್ಯಾಂಶ ಹುದುಗಿದೆ. ಕಳ್ಳನಮುಚ್ಚುವಿಕೆಯಲ್ಲಾದರೋ ತಾನು ಮಾಡಿರುವೆನೆಂಬ ಅನ್ಯಾಯ, ಅಶ್ಲೀಲ, ಅದನ್ನ ಕೇಳಿಜನ ಖತಿಗೊಂಡಾರು ಎಂಬ ದೈನಭೀತಿಯಿದೆ. ಈ ದೃಷ್ಟಿಯಿಂದ ತನ್ನ ಕರ್ತವ್ಯವಾದ ಧರ್ಮಕಾರ್ಯಗಳನ್ನು ಮಾಡಿದ ಸಭ್ಯನು ಹಮ್ಮಿನಿಂದ ವರ್ತಿಸಿದರೆ ಅವನು ಕಳ್ಳನಿಗಿಂತ ಹೆಚ್ಚು ಅಪರಾಧಿ.

ಈತೂಕದಪ್ರಕಾರ ಕಡಿಮೆ ಅಪರಾಧಮಾಡಿದವನೆಂಬ ಕಳ್ಳನನ್ನು ಶಿಕ್ಷಿಸದೇ ರಾಜನು ಬಿಡುವುದಿಲ್ಲ. ಅವನನ್ನುಶೂಲಕ್ಕೇರಿಸುವಂತೆ ಆಜ್ಞಾಪಿಸುವನು. ತಲೆಹೊಯ್ಕರು ಡಂಗುರ ಹೊಯ್ದು ಬೀದಿ ಬೀದಿಯಲ್ಲಿ ಅವನನ್ನು ಮೆರೆಸಿ ವಧ್ಯಸ್ಥಾನಕ್ಕೆ ಕರೆದೊಯ್ಯು ವರು. ಅಂದ ಮೇಲೆ ಪ್ರಕಟನ ಕಾಮಿಯಾಗಿ ಮಹಾಪರಾಧಿಯಾದ ಅಸಭ್ಯಂಮನ್ಯ ನನ್ನು ರಾಜ, ರಾಜನಾದ ಶಿವನು ಬಿಟ್ಟಾನೆ, ಕಳ್ಳನನ್ನು ಶಿಕ್ಷಿಸಲು ರಾಜನಿಗೆ ಹೊರಗಣ ರುಜವಾತುಬೇಕು. ಅದು ಒದಗದೆ ಕಳ್ಳನೊಬ್ಬ ಶಿಕ್ಷೆಯಿಂದ ತಪ್ಪಿಸಿ ಕ್ಕೊಳ್ಳಬಹುದು. ಆದರೆ ಭಕ್ತನಾದವನಕೀರ್ತಿ ಕಾಮಾಪರಾಧವೂ ಪ್ರಚ್ಛನ್ನವಾಗಿದ್ದರೂ ಆದನ್ನು ಅಂತ-ರ್ಯಾಮಿಯಾದ ಶಿವನು ಅರಿತು ಅದಕ್ಕೆ ಸರಿತೂಗುವ ಶಿಕ್ಷೆಯನ್ನು ಕೊಟ್ಟೇ ತೀರುವನು. ಮೆರೆಯಬೇಕೆಂದವನನ್ನು ಇನ್ನೂ ಹೆಚ್ಚಾಗಿಮೆರೆಸಿ ಮುರಿಯುವನು.

ಮಾಡಿದೆನೆಂಬುದು ಮನದಲ್ಲಿ ಹೊಳೆದುದಕ್ಕೆ ಪ್ರತಿಕ್ರಿಯೆ ಕಾಣುವಂತೆ ಕಟುವಾದುದೇನೂ ಅಲ್ಲ. ಮೊದಲನೆಯದಾಗಿ ಅನುಕೂಲ ವಾತಾವರಣವಿಲ್ಲದಾಗಲೂ ಕರ್ತವ್ಯ ಪರಿಪಾಲನೆ ಅಪರಿಹಾರ್ಯ. ಎರಡನೆಯದಾಗಿ ಕರ್ತವ್ಯವನ್ನು ಪಾಲಿಸಿದವನು ಅದನ್ನು ಕೊಚ್ಚಿಕೊಳ್ಳುವುದರಲ್ಲಿ ಇತರರ ಕಾಲವನ್ನು ಅಪಹರಿಸುವುದು ಕಳ್ಳತನವಲ್ಲದೆ ಅದಕ್ಕಿಂತ ಕಡಿಮೆಯೇನು ಅಲ್ಲ. ಜೊತೆಗೆ ಅವನು ಸ್ವಪ್ರಶಂಸೆಯಲ್ಲಿ ತೊಡಗಿದಷ್ಟು ಕಾಲವೂ ಕರ್ತವ್ಯ ಭ್ರಷ್ಟನಾಗಿರುವನು. ಇದು ಪ್ರಕಟವಾಗಿ ತನ್ನನ್ನುತಾನೆ ಹೊಗಳಿಕೊಳ್ಳುವವನಿಗೆ ಅನ್ವಯಿಸುವ ಮಾತು. ಹಾಗಲ್ಲದೆ ಪ್ರಶಂಸಾಲಾಲನೆಯನ್ನು ಮನಸ್ಸಿನಲ್ಲಿಯೇ ಇಟ್ಟುಕೊಂಡಿರುವವನು, ಅದನ್ನು ಇನ್ನೊಬ್ಬರ ಬಾಯಿಂದ ಹೇಳಿಸುವ ಬಲತ್ಕಾರದ ಪರಿಸ್ಥಿತಿಗೆ ಕಾರಣಕರ್ತನಾಗುವನು. ಭಕ್ತನು ಈ ಕೌಟಿಲ್ಯ ಜಟಿಲ ತಂತ್ರದಲ್ಲಿ ಮಗ್ನನಾದನೆಂದರೆ ಕರ್ತವ್ಯಗಳಿಗೆ ಅವನು ತಿಲಾಂಜಲಿಯಿತ್ತಂತೆಯೇ !

ಶಿವನಿಗೆ ಪ್ರಿಯವಾದುದು ನಿರಹಂಕಾರ ಮತ್ತು ನಿರಾಡಂಬರ. ಅವಿಲ್ಲದಿದ್ದರೆ ಉಗ್ರಕೋಪ: ಪರಿಣಾಮ ದುರ್ಗತಿ, ಆದುದರಿಂದ ಲಿಂಗಕ್ಕೆ ಜಂಗಮಲಿಂಗ ಸ್ವರೂಪಿಯಾದ ಜಂಗಮನಿಗೆ ಮಾಡಿದೆನೆಂದು ಕೊಚ್ಚಿಕೊಳ್ಳಬೇಡಿ. ನಾವು ಅವರಿಗೆ ಮಾಡುವ ಸತ್ಕಾರಕ್ಕಿಂತ ಅವರು ನಮಗೆ ಮಾಡಲವಕಾಶಕೊಟ್ಟ ಕೃಪೆ ದೊಡ್ಡದು. ಸಾವಿಗಾಗಿ ಸೇವಕನು ದುಡಿದು ವಿನಮ್ರನಾಗಿರುವನೇ ಹೊರತು ತಾನು ಮಾಡಿದ್ದೆಲ್ಲ ಉಪಕಾರವೆಂಬಂತೆ ಉದ್ವೃತ್ತನಾಗಿರುವುದಿಲ್ಲ. ಅದು ಅವನ ಕರ್ತವ್ಯವೆಂಬುದೇ ಅವನ ಭಾವನೆ. ಈ ಸೇವಾಮನೋಧರ್ಮವಿದ್ದರೆ ಮಾತ್ರ ಶಿವನೊಲಿಯುವನೆಂಬುದೇ ಬಸವಣ್ಣನವರ ಅಭಿಪ್ರಾಯ.

ಆದುದರಿಂದಲೇ ಮಾಡುವ ಕರ್ಮ, ಕೀರ್ತಿಕಾಮದಿಂದ ಕಳಂಕಿತವಾಗಿರಬಾರದು. ಅಧಿಕ ಶಿವಾರ್ಪಣ ಭಾವಬದ್ಧರಾಗಿರಬೇಕು.

( ಕೃಪೆ :– ಬಸವಕ್ರಾಂತಿ. )



# ವಿಜ್ಞಾನ ಮತ್ತು ಆಧ್ಯಾತ್ಮ

ಎಚ್. ಎಸ್. ನರಸಿಂಹಜೀಯರ್, ಶ್ರೀ ಬಸವೇಶ್ವರ ಇಂಗ್ಲಿಷ್ ಪಾಠಶಾಲೆ, ತುಮಕೂರು-2,

ವಿಜ್ಞಾನ ಮತ್ತು ಆಧ್ಯಾತ್ಮ—ಇವೆರಡೂ ಒಂದಕ್ಕೊಂದು ಸಂಬಂಧವಿಲ್ಲದ ಹಾಗೂ ಹೊಂದಾಣಿಕೆ ಮಾಡಲಾಗದ ವಿಷಯಗಳೆಂದು ಕೆಲವರು ಭಾವಿಸಿದ್ದಾರೆ. ಆದರೆ ವಾಸ್ತವಿಕವಾಗಿ ಇವೆರಡು ಒಂದಕ್ಕೊಂದು ಪೂರಕ. ವಿಜ್ಞಾನವು ಭೌತಪ್ರಪಂಚದ ವಿಷಯದಸತ್ಯವನ್ನು ತಿಳಿಸುತ್ತದೆ. ಆಧ್ಯಾತ್ಮವು ಭೌತಪ್ರಪಂಚ ಹಾಗೂ ಇನ್ನೂ ಮುಂದೆಸಾಗಿ ಇಡೀ ಸೃಷ್ಟಿಯ ಬಗ್ಗೆ ಹಾಗೂ ಮಾನವನ ಹುಟ್ಟು, ಸಾವು, ಬದುಕು ಇವುಗಳ ಬಗ್ಗೆಯೂ ವಿಚಾರವಂತರನ್ನು ಎಳೆಯುತ್ತದೆ. ಡಾ||ಎ. ಕೆ. ಗಂಗೂಲಿಯವರು.

"Science stops short at matter in its persuit of truth, while spirituality, after studying the phenomenal world, goes beyond it to probe deeper into the Reality underlying the whole creation" ಎಂದಿದ್ದಾರೆ.

ವೇದಗಳ ಕಾಲದಿಂದಲೂ ವಿಜ್ಞಾನ ಮತ್ತು ಆಧ್ಯಾತ್ಮ ಒಟ್ಟಿಗೆ ಬೆಳೆದು ಬಂದು ಸಮಾಜದ ಉನ್ನತಿಗೆ ಕಾರಣವಾಗಿವೆ. ವೇದಗಳಲ್ಲಿಯೂ ವಿಜ್ಞಾನವಿದೆ, ನಾಲ್ಕು ವೇದಗಳ ಭಾಗಗಳಾದ ಉಪವೇದಗಳಲ್ಲಿ ವಿಜ್ಞಾನದವಿಷಯಗಳನ್ನೇ ಪ್ರತಿಪಾದಿಸಿದ್ದಾರೆ.

| ವೇದ | ಉಪವೇದ |
|---|---|
| ಋಗ್ವೇದ | ಆಯುರ್ವೇದ. |
| ಸಾಮವೇದ | ಗಂಧರ್ವವೇದ |
| ಯಜುರ್ವೇದ | ಧನುರ್ವೇದ |
| ಅಥರ್ವವೇದ | ಸ್ಥಪತ್ಯವೇದ |

ಋಗ್ವೇದದ ಭಾಗವಾದ ಉಪವೇದ ಆಯುರ್ವೇದದಲ್ಲಿ ಮಾನವನ ಶರೀರ ಶಾಸ್ತ್ರ (Anatomy), ಪ್ರಾಣಿ ಮತ್ತು ವನಸ್ಪತಿಗಳ ಗುಣ ಧರ್ಮಶಾಸ್ತ್ರ (phisiology), ಆರೋಗ್ಯ ಮತ್ತು ಶುಚಿತ್ವ (Sanitary science), ರೋಗಗಳು ಮತ್ತು ರೋಗಲಕ್ಷಣ ಪರೀಕ್ಷೆ (diseases and their diagnosis), ವನಸ್ಪತಿಗಳಿಂದ ರೋಗಗಳಿಗೆ ಔಷಧಿ ತಯಾರಿಕೆ, ಪಥ್ಯ, ಅಪಥ್ಯ ಅಲ್ಲದೆ ಶಸ್ತ್ರಚಿಕಿತ್ಸೆ (Surgery) ಬಗ್ಗೆಯೂ ವಿವರವಾಗಿ ತಿಳಿಸಲಾಗಿದೆ. ಸಾಮವೇದದ ಉಪವೇದ ಗಂಧರ್ವವೇದದಲ್ಲಿ ಸಂಗೀತಶಾಸ್ತ್ರ, ನೃತ್ಯ ಶಾಸ್ತ್ರದ ಬಗ್ಗೆ (Science of music and dancing) ತಿಳಿಸಲಾಗಿದೆ. ಯಜುರ್ವೇದದ ಉಪವೇದ ಧನುರ್ವೇದದಲ್ಲಿ

ಯುದ್ಧ ಹಾಗೂ ಯುದ್ಧ ಕೌಶಲಗಳ (Militaryscience) ಮತ್ತು ಧನುರ್ವಿದ್ಯೆ (Archery) ಬಗ್ಗೆ ವಿವರಿಸಲಾಗಿದೆ. ಅಥರ್ವವೇದದ ಉಪವೇದವೇ ಸ್ಥಪತ್ಯವೇದ. ಇದರಲ್ಲಿ ಬಹುಮುಖ್ಯವಾದ ಶಿಲ್ಪಶಾಸ್ತ್ರ ( Architecture ), ಯಂತ್ರವಿದ್ಯೆ (mechanics) ಯಂತ್ರ ಶಾಸ್ತ್ರಜ್ಞನಿಗೆ ಸಂಬಂಧಿಸಿದಶಾಸ್ತ್ರ (engineering) ಮತ್ತು ಗಣಿತಶಾಸ್ತ್ರ (Mathematics) ಭಾಗಗಳಿವೆ. ಇವೆಲ್ಲವೂ ವೈಜ್ಞಾನಿಕ ವಿಷಯಗಳೇ ಆಗಿವೆ.

ಇಷ್ಟೇ ಅಲ್ಲದೇ ಆತ್ಮವಿದ್ಯೆ (Spiritual wisdom)ಕಲಿಯುವ ಶಿಷ್ಯನು ಅರಿಯಬೇಕಾದ ಇತರೆ ವಿಷಯಗಳ ಬಗ್ಗೆ ಛಾಂದೋಗ್ಯ ಉಪನಿಷತ್ತಿನಲ್ಲಿ ವಿವರಗ -ಳಿವೆ. ಆತನು ಪ್ರಮುಖವಿಷಯಗಳಾದ ಇತಿಹಾಸ(History), ಪುರಾಣ (Literature); ರಾಶಿವಿದ್ಯಾ (Mathematics); ದೈವವಿದ್ಯಾ (extra-mundane science); ನಿಧಿವಿದ್ಯಾ (Economics); ವಾಕ್ಯವಿದ್ಯಾ (Logic philosophy); ಏಕಯತನ (Ethics and politics); ಭೂತವಿದ್ಯಾ ( Physics ); ಕ್ಷಾತ್ರವಿದ್ಯಾ ( Military science ); ನಕ್ಷತ್ರವಿದ್ಯಾ ( Astronomy ) ಕಾರ್ಪವಿದ್ಯಾ ( Texicology ) ಮತ್ತು ಜನ ವಿದ್ಯಾ (Social psychology) ಈ ವಿಷಯಗಳಲ್ಲಿಯೂ ಪರಿಣತಿ ಹೊಂದಿರ ಬೇಕೆಂದು ಆಚಾರ್ಯರು ನಿಯಮ ವಿಧಿಸಿದ್ದಾರೆ.

ವೇದ, ಉಪನಿಷತ್ತು ಮತ್ತು ಬ್ರಹ್ಮಸೂತ್ರಗಳನ್ನು ಸಮಗ್ರವಾಗಿ ಪರಿಶೀಲಿಸಿದ ಪಾಶ್ಚಿಮಾತ್ಯರು ತಮ್ಮ ಅಭಿಪ್ರಾಯಗಳನ್ನು ಈರೀತಿ ವಿವರಿಸಿದ್ದಾರೆ.

ಡಾ|| ಕೆನೆತ್‌ವಾಕರ್ The Vedantha is an attempt to sum up the whole of humana knlowledge and it makes use of the whole human experience. At one time it is religion at another times philosophy and at still another a science" ಎಂದಿದ್ದಾರೆ.

ಡಾ|| ಗೆರಾಲ್ ಹಾರ್ಡ್ ಎಂಬುವರು "The Vedantha is the most scientific exposition of laws governing the Universe" ಎಂಬುದಾಗಿ ವೇದಾಂತದ ಬಗ್ಗೆ ತಮ್ಮಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಕೋಪರ್ ನಿಕಸ್, ಗೆಲಿಲಿಯೋ ಕಂಡುಹಿಡಿದ ಅನೇಕ ವೈಜ್ಞಾನಿಕ ಅಂಶಗಳನ್ನು

ಭಾರತೀಯರು ಅರಿತಿದ್ದರು. ನಕ್ಷತ್ರಗಳ ಬಗ್ಗೆ ಈಗಿನ ವಿಜ್ಞಾನಿಗಳಿಗಿದ್ದ ತಪ್ಪು ಅಭಿಪ್ರಾಯವನ್ನು ವೇದ ಉಪನಿಷತ್ತುಗಳ ಆಧಾರದಿಂದ ಭಾರತೀಯರು ಸರಿಪಡಿಸಿದ್ದಾರೆ. ನಮ್ಮ ಸುತ್ತಲೂ ಅನೇಕ ವಿಶ್ವಗಳು ಬ್ರಹಾಂಡದಲ್ಲಿವೆ ಎಂಬ ವಿಚಾರವನ್ನು ಈಗ ವಿಜ್ಞಾನ ಹೇಳುತ್ತಿದೆ. ಇದನ್ನರಿತು ಭಾರತೀಯರು ಹಿಂದೆಯೇ ಇಂತಹ ಬ್ರಹ್ಮಾಂಡವನ್ನು ಸೃಷ್ಟಿಸಿದ ಕರ್ತೃವನ್ನು "ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ"ನೆಂದು ಕರೆದರು.

ಸ್ವಾಮಿ ವಿವೇಕಾನಂದರು ವಿಜ್ಞಾನದ ಆವಿಷ್ಕಾರಗಳನ್ನು ಗಮನಿಸಿ "That discoveries and inventions of modern science sound as small echoes of the majestic roar of the lion of Vedantha" ಎಂದು ಗಂಭೀರವಾಗಿ ನುಡಿದಿದ್ದಾರೆ.

ಗಣಿತವು ವಿಜ್ಞಾನ ಬೆಳವಣಿಗೆಗೆ ತಳಹದಿ. ಹಿರಿಯರು "Mathematics is the queen of sciences" ಎಂದಿದ್ದಾರೆ. ಇಂತಹ ಗಣಿತ ಶಾಸ್ತ್ರದ ಚರಿತ್ರೆಯನ್ನು (History of mathematics) ರಚಿಸಿದ ಪ್ರೊಫೆಸರ್ ಡಿ.ಸಿ. ಮಾರ್ಗನ್‌ರವರು ಭಾರತೀಯ ಗಣಿತಶಾಸ್ತ್ರದ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ "even the highest and farthest reaches of modern Western Mathematics have not yet brought the western world to the threshold of ancient Indian mathematics', ಎಂಬುದಾಗಿ ಪ್ರಶಂಸಿದ್ದಾರೆ.

ರಾಜ ಮಹೇಂದ್ರಿ ಕಾಲೇಜಿನ ಪ್ರಾಂಶುಪಾಲರಾಗಿದ್ದು ಸನ್ಯಾಸ ದೀಕ್ಷೆಯನ್ನು ಪಡೆದು ಪುರಿಯ ಗೋವರ್ಧನಮಠದ ಶಂಕರಾಚಾರ್ಯರಾಗಿ ಪೀಠಾಧಿಪತಿಗಳಾಗಿದ್ದ ಜಗದ್ಗುರು ಸ್ವಾಮಿ ಶ್ರೀ ಭಾರತಿ ಕೃಷ್ಣ ತೀರ್ಥಜಿ ಮಹರಾಜ್ (1884-1960) ರವರು ವೇದ ವಿದ್ಯಾ ಪಾರಂಗತರು, ಗಣಿತ ಶಾಸ್ತ್ರ ಹಾಗೂ ವಿಜ್ಞಾನದಲ್ಲಿ ಪರಿಣಿತರು. ತಮ್ಮ ಪೂರ್ವಾಶ್ರಮದಲ್ಲಿ ಇವರು ಸಂಸ್ಕೃತ, ತತ್ವಶಾಸ್ತ್ರ, ಇಂಗ್ಲಿಷ್, ಗಣಿತ, ವಿಜ್ಞಾನ, ಚರಿತ್ರೆ ಮುಂತಾದ ಏಳು ವಿಷಯಗಳಲ್ಲಿ ಎಂ.ಎ., ಪದವೀಧರರು. ನ್ಯೂಯಾರ್ಕನ ರೋಚೆಸ್ಟರ್ ವಿಶ್ವವಿದ್ಯಾನಿಲಯದ ಎಂ.ಎ., ಪರೀಕ್ಷೆಯಲ್ಲಿ ಹೆಚ್ಚಿನ ಅಂಕಪಡೆದು ಬಹುಮಾನಿತರಾದವರು. ಪಾಶ್ಚಾತ್ಯ ದೇಶಗಳಿಗೂ ಭೇಟಿಕೊಟ್ಟು ಭಾರತೀಯ ಸಂಸ್ಕೃತಿಯ ಬಗ್ಗೆ ಪಾಶ್ಚಾತ್ಯರಿಗೆ ಪರಿಚಯ ಮಾಡಿಕೊಟ್ಟವರು.

ಇವರು " Vedic Mathematics " ಎಂಬ ಅಮೂಲ್ಯವಾದ ಗ್ರಂಥ ರತ್ನವನ್ನು ರಚಿಸಿದ್ದಾರೆ. ಅಥರ್ವವೇದದ ಉಪವೇದವಾದ ಸ್ಥಪತ್ಯ ವೇದದ ಹದಿನಾರು ಸೂತ್ರಗಳಿಂದ Arithmetic, Algebra, Geometry ( Plane and Solid), Trigonometry (Plane and Spherical) Conics, (geometrical and analytical ), Astronomy, calculus ( differential and integral ). ಈ ವಿಷಯಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಹೇಗೆ ಬಿಡಿಸಬಹುದೆಂಬುದನ್ನು ಉದಾಹರಣೆಗಳ ಮೂಲಕ ವಿವರಿಸಿದ್ದಾರೆ. ಇಂತಹ ಪರಿಪೂರ್ಣ ವಿದ್ವಾಂಸರು ಆಧುನಿಕ ವಿಜ್ಞಾನವನ್ನು, ವೇದ ಉಪನಿಷತ್ತುಗಳನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಈ ರೀತಿ ತಮ್ಮ ಖಚಿತ ಅಭಿಪ್ರಾಯ-ತಿಳಿಸಿದ್ದಾರೆ.

" The very word " Veda " has this derivational meaning, that is, the fountain head and unlimited store house of all Knowledge. This derivation in effect Connotes that the vedas should contain in themselves all the Knowledge needed by mankind relating not only to the so called " Spiritual " ( or other worldly) matters but also to those usually described as purely ' Secular ' ' temporal ' or wordly and also to the means required by humanity as such for the achievement of all round, Complete and perfect success in all conceivable directions, The vedantha is theScience of Sciences "

# ಶಿವಶರಣರ ವಚನಗಳ ಉಗಮ ಭಾಗ-೪

ಎನ್. ಚನ್ನಬಸಪ್ಪ, ಗಮುಕಿ. ೫೪೩, ೫ ನೇ ಅಡ್ಡರಸ್ತೆ. ೮ನೇ ಮುಖ್ಯರಸ್ತೆ, ಮಹಾಲಕ್ಷ್ಮಿ ಲೇ-ಔಟ್
ಬೆಂಗಳೂರು-೫೬೦೦೮೬

ಒಮ್ಮೆ ಕಾಶ್ಮೀರದ ಮಹದೇವರಸರು ಬಸವಣ್ಣನ ಕೀರ್ತಿ ಗೌರವಗಳಿಗೆ ಅಸೂಯೆಪಟ್ಟು ಅವರನ್ನು ಕೊಲೆ ಮಾಡಲು ಪ್ರೇರೇಪಿಸಿ ಚಿಕ್ಕಯ್ಯನೆಂಬ ಯೋಧ-ನೊಬ್ಬನನ್ನು ಕಲ್ಯಾಣಕ್ಕೆ ಕಳುಹಿಸಿದ್ದ. ಅನುಭವಗೋಷ್ಠಿಯಲ್ಲಿ ಜನರ ಮಧ್ಯೆ ಕುಳಿತು ಪ್ರಭುದೇವರು ದೇಹದ ಮೇಲಿನ ಇಷ್ಟಲಿಂಗಕ್ಕೆ ಅನ್ವಯಿಸಿ ಹೇಳದ ಮಾತನ್ನು ತನ್ನ ಜೀವನಕ್ಕೆ ಹೋಲಿಸಿಕೊಂಡು ಪರಿವರ್ತನೆಗೊಳಗಾದ. ಆಗ ಅಲ್ಲಮ ಪ್ರಭುವಿನಿಂದ ಕೇಳಿದ ವಚನ.

ವಚನ-೩೯.

ಎತ್ತಣ ಮಾಮರ? ಎತ್ತಣ ಕೋಗಿಲೆ?
ಎತ್ತಣಿಂದೆತ್ತ ಸಂಬಂಧವಯ್ಯಾ ?
ಬೆಟ್ಟದನೆಲ್ಲಿಕಾಯಿ, ಸಮುದ್ರದೊಳಗಣ ಉಪ್ಪು
ಎತ್ತಣಿಂದೆತ್ತ ಸಂಬಂಧವಯ್ಯಾ ?
ಗುಹೇಶ್ವರನ ಲಿಂಗಕ್ಕೆಯೂ ಎನಗೆಯೂ
ಎತ್ತಣಿಂದೆತ್ತ ಸಂಬಂಧವಯ್ಯಾ !

ಕಾಶ್ಮೀರವೆಲ್ಲಿ? ಕರ್ನಾಟಕವೆಲ್ಲಿ? ಸವಾಲಕ್ಷದ ಮಹಾದೇವರಸರ ಬಳಿಯಲ್ಲಿ ಯೋಧನಾಗಿದ್ದುದೆತ್ತ. ಕಲ್ಯಾಣದ ಮಹಾಮನೆಯಲ್ಲಿ ಶರಣನಾಗಿರುವುದೆತ್ತ, ? ಬಂದಮೊದಲಲ್ಲಿ ಎರಡು ಮೂರು ದಿನಗಳು ಮಹಾಮನೆಯ ಸುತ್ತ ಸುಳಿದಾಡಿದೆ. ಅನುಭವ ಗೋಷ್ಠಿಯ ಸಮಯದಲ್ಲಿ ಹೋದೆ ದಾಸೋಹ ಸಮಯದಲ್ಲಿ ಹೊಂಚು ಹಾಕಿದೆ. ಅಸ್ಪದ ದೊರೆಯಲಿಲ್ಲ. ಅಷ್ಟರಲ್ಲಿ ಒಂದು ವಿಷಯ ಮನದಟ್ಟಾಯಿತು, ಲಿಂಗ ಲಾಂಛನವನ್ನು ಧರಿಸಿಕೊಂಡರೆ ತೀರ ಹೋಗಿ ಒಳಹೊಕ್ಕು ಬಸವಣ್ಣನ ನೇರದರ್ಶನ ಪಡೆಯಬಹುದೆಂದು. ಕೊನೆಗೊಂದು ದಿನ ಮುಂಜಾನೆ ಜಂಗಮವೇಷ -ಧರಿಸಿದೆ; ಮಾರುಕಟ್ಟೆಯಿಂದ ತಂದಿದ್ದ ಲಿಂಗಾಕಾರದ ಒಂದು ಬದನೇಕಾಯನ್ನು ಕಾವಿಯುವಸ್ತ್ರದಲ್ಲಿಸುತ್ತಿ ಕೊರಳಿಗೆ ಕಟ್ಟಿಕೊಂಡುಮಹಾಮನೆಯ ಮಹಾದ್ವಾರವನ್ನು ಪ್ರವೇಶಿಸುತ್ತಿದ್ದಂತೆ ಅಪ್ಪಣ್ಣ ಸ್ವಾಗತಿಸಿದರು. ಮಹಾಮನೆಯ ಪೂಜಾಮಂದಿರ ಒಳಹೊಕ್ಕೆ. ಎಲ್ಲರಂತೆ ಪೂಜೆಗೆ ಸಿದ್ಧನಾಗದೆ ಅತ್ತಿತ್ತ ನೋಡುತ್ತಿದ್ದೆ. ಅಷ್ಟರಲ್ಲಿ ಬಸವಣ್ಣನವರು ಅಲ್ಲಿಗೆ ಬಂದು ನನ್ನತ್ತ ನೋಡಿ! "ಪೂಜೆನಡೆಯಲಿ"; ಶರಣರೆ ಎಂದು ಬೆನ್ನಮೇಲೆ ಕೈಯಿಟ್ಟರು. ಮೈಪುಳಕಿತವಾದಂತಾಯಿತು. ನಿರ್ವಾಹವಿಲ್ಲದೆ ಕೊರಳಿನ

ಕಟ್ಟನ್ನು ಬಿಚ್ಚಿದೆ ಆಶ್ಚರ್ಯಕ್ಕೆ ಪಾರವಿಲ್ಲ. ಇಷ್ಟಿದ್ದ ಬದನೇಕಾಯಿ ಲಿಂಗವಾಗಿತ್ತು; ಪೂಜೆಮಾಡಿ ಮುಗಿಸಿದೆ. ನನ್ನನ್ನು ಒಬ್ಬ ಶರಣನನ್ನಾಗಿ ಮಾಡಿ; ನಿಜಲಿಂಗಚಿಕ್ಕಯ್ಯ ಎಂದು ಹೆಸರಿಟ್ಟು ನೀವು ಬಲೆಕಾಯಕವನ್ನು ಕೈಕೊಳ್ಳಿ ಎಂದು ಹೇಳಿ ಓಲೆ ಶಾಂತಯ್ಯನವರ ನೆರವನ್ನು ಕೊಟ್ಟು ಆಶೀರ್ವದಿಸಿದರು. ಅಂದಿಗೆ ನನ್ನ ಜನ್ಮ ಸಾರ್ಥಕವಾಯಿತು.

ಒಮ್ಮೆ ಅನುಭವ ಗೋಷ್ಠಿಯಲ್ಲಿ ಕಿನ್ನರಿ ಬೊಮ್ಮಯ್ಯನವರು ಬಸವಣ್ಣನವರು ಕೊಟ್ಟ ವಚನ ಒಂದನ್ನು ತಮ್ಮ ಪಕ್ಕವಾದ್ಯ ಕಿನ್ನರಿಯನು ಭಾರಿಸುತ್ತ ಹಾಡತೊಡಗಿದರ

**ವಚನ–40** ಹೊನ್ನುಮಾಯೆ ಯೆಂಬರು, ಹೊನ್ನು ಮಾಯೆಯಲ್ಲ ;
ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ.
ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ ,
ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರ

ಇದು ಎಲ್ಲ ಶರಣರ ಮೆಚ್ಚುಗೆಗೆ ಪಾತ್ರವಾಯಿತು. ಅನಂತರ ಇದೇ ಮಾದರಿಯ ಇನ್ನೊಂದು ವಚನ ;

**ವಚನ–41** ಆಶೆಗೆ ಸುತ್ತದು ಕೋಟಿ,
ಆಮಿಷಕ್ಕೆ ಸತ್ತುದು ಕೋಟಿ,
ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ.
ಗುಹೇಶ್ವರ ನಿಮಗಾಗಿ ಸತ್ತವರ ನಾರನೂ ಕಾಣೆ:

ಇದನ್ನು ಕೇಳಿ ಆತನಿಗೆ ಉತ್ತೇಜನವಿತ್ತರು, ಕೊನೆಯದಾಗಿ ಈ ವಚನ ಪ್ರಾರಂಭಿಸಿದ;

**ವಚನ–42** ಅಚಲ ಸಿಂಹಾಸನವನಿಕ್ಕಿ ನಿಶ್ಚಲ ಮಂಟಪದ
ಸಂಚದೋವರಿಯೊಳಗೆ ರುಚಿಗಳೆಲ್ಲವ ನಿಲಿಸಿ;
ಪಂಚರತ್ನದ ಶಿಖರ, ಮಿಂಚು ಕೋಟಿಯ ಕಳಶ
ವಚನ ಚಿತ್ರದ ಪುಷ್ಪದ ರಚನೆಯ ನವರಂಗದಲ್ಲಿ
ಖೇಚರಾದಿಯ ಗಮನ ವಿಚಾರಪರನುಂಗಿ
ಗುಹೇಶ್ವರನಿಂದ ನಿಲವು ಸಚರಾಚರವ ಮೀರಿತ್ತು,

ಕಿನ್ನರಯ್ಯನು ಈ ರೀತಿ ಹಾಡಿದವಚನವನ್ನು ಕೇಳಿ ಎಲ್ಲರೂ ಮೆಚ್ಚಿಗೆಯನ್ನು ಸೂಚಿಸಿದರು.

ನಂತರ ಬಸವಣ್ಣನವರು ಕಕ್ಕಯ್ಯನವರ ನುಡಿಗಳಿಗೆ ಅನುವು ಮಾಡಿದರು.

ಕಕ್ಕಯ್ಯನವರ ವಚನ:-

ವಚನ-43 ಕಷ್ಟ ಕುಲದಲ್ಲಿ ಹುಟ್ಟಿದ ಕರ್ಮವ ಕಳೆದು,
ಮುಟ್ಟಿ ಪಾವನವ ಮಾಡಿ ಕೊಟ್ಟನಯ್ಯಾ ಎನ್ನಕರಸ್ಥಲಕ್ಕೆ ಲಿಂಗವ;
ಆ ಲಿಂಗಬಂದು ಸೋಂಕಲೊಡನೆ
ಎನ್ನ ಸರ್ವಾಂಗದ ಅವಲೋಹವಳಿಯಿತ್ತಯ್ಯಾ
ಎನ್ನ ತನುವಿನಲ್ಲಿ ಗುರುವ ನೆಲೆಗೊಳಿಸಿದ;
ಎನ್ನ ಮನದಲ್ಲಿ ಜಂಗಮವ ನೆಲೆಗೊಳಿಸಿದ.
ಎನ್ನ ಅರಿವಿನಲ್ಲಿ ಪ್ರಸಾದವ ನೆಲೆಗೊಳಿಸಿದ;
ಇಂತೀ ತ್ರಿವಿಧ ಸ್ಥಾನವ ಶುದ್ಧವ ಮಾಡಿದೆ ಬಸವಣ್ಣಾ.

ಎಂದು ಹಾಡಿ ಈ ಗೌರವವನ್ನು ಕೊಟ್ಟ ತಮ್ಮೆಲ್ಲರಿಗೂ ವಂದಿನೆ ಎಂದ ನಂತರ ಬಸವಣ್ಣನು ಮತ್ತೆ ಕಿನ್ನರಯ್ಯನವರನ್ನು ಮತ್ತೊಂದು ವಚನವನ್ನು ಹಾಡಿ ಈ ಗೋಷ್ಠಿಯನ್ನು ಮುಗಿಸಿ ಎಂದರು. ಆಗ ಮತ್ತೆ ಕಿನ್ನರಿ ಬೊಮ್ಮಯ್ಯನವರಿಂದ ಮತ್ತೊಂದು ವಚನ:

ವಚನ-44 ಗಗನವೇ ಗುಂಡಿಗೆ ಆಕಾಶವೇ ಅಗ್ಗವಣಿ।
ಚಂದ್ರ ಸೂರ್ಯರಿಬ್ಬರು ಪುಷ್ಪ ನೋಡಾ।
ಬ್ರಹ್ಮಧೂಪ, ವಿಷ್ಣುದೀಪ, ರುದ್ರನೋಗರ!
ಸುಯಿಧಾನ ನೋಡಾ। ಗುಹೇಶ್ವರ ಲಿಂಗಕ್ಕೆ ಪೂಜೆ ನೋಡಾ।

ಈ ರೀತಿ ವಚನಗಳನ್ನು ಹಾಡಿ ಶರಣರೆಲ್ಲರೂ ಗೋಷ್ಠಿಯನ್ನು ಮುಕ್ತಾಯಗೊಳಿಸಿದರು.

ಒಮ್ಮೆ ಸೊನ್ನಲಿಗೆಯಲ್ಲಿ ಅಲ್ಲಮಪ್ರಭು ಸಿದ್ಧರಾಮರ ಆಧ್ಯಾತ್ಮಿಕ ನಿಲವುಗಳ ಸಂಘರ್ಷಣೆ ಬಸವ ಸ್ಮರಣೆಯಲ್ಲಿ ಕೊನೆಗೊಂಡಾಗ ಅವುಗಳ ಸ್ಪಂದನೆಯ ಪ್ರಭಾವ ಇಲ್ಲಿ ಬಸವಣ್ಣನ ಹೃದಯದಲ್ಲಿಯೂ ಒಂದು ಅಲೆಯನ್ನೆಬ್ಬಿಸಿತು. ಬಸವಣ್ಣ ಕಣ್ಮುಚ್ಚಿ ಧ್ಯಾನಾಸಕ್ತನಾದ. ಇಬ್ಬರೂ ಬಸವಣ್ಣನನ್ನುಸ್ಮರಿಸಿಕೊಂಡು ಕಲ್ಯಾಣದತ್ತ ಬಂದವರಾದರು. ಆಗ ಅಲ್ಲಮರು ನುಡಿದ ವಚನ:

ವಚನ-45 ಆಯುತ ಲಿಂಗವಿಡಿದು ಸ್ವಾಯುತ ಲಿಂಗವ ಕಾಣಬೇಕು, ಸಿದ್ಧರಾಮಯ್ಯ;
ಸ್ವಾಯುತ ಲಿಂಗವಿಡಿದು ಜಂಗಮ ಲಿಂಗವಕಾಣಬೇಕು ಸಿದ್ಧರಾಮಯ್ಯ;
ಜಂಗಮ ಲಿಂಗವಿಡಿದು ಗುರುಲಿಂಗವ ಕಾಣಬೇಕು ಸಿದ್ಧರಾಮಯ್ಯ
ಗುರುಲಿಂಗ ವಿಡಿದು ಶಿವಲಿಂಗವ ಕಾಣಬೇಕು ಸಿದ್ಧರಾಮಯ್ಯ;

ಶಿವಲಿಂಗ ವಿಡಿದು ಪ್ರಸಾದ ಲಿಂಗವನರಿಯಬೇಕು ಸಿದ್ಧರಾಮಯ್ಯ
ಇಂತುಷಡುಸ್ಥಲದಂತುವ ಸಾಧಿಸಿ ಒಂದು ಮಾಡಿಕೊಂಡಿಪ್ಪ
ಕರಸ್ಥಲದವನು ಗುಹೇಶ್ವರನ ಶರಣ ಸಂಗನ ಬಸವಣ್ಣ
ಬಲ್ಲ ಬೆಸಗೊಂಬ ಬಾರಾ ಸಿದ್ಧರಾಮಯ್ಯ.

ಎಂದು ವಚನಹಾಡಿ ಸಿದ್ಧರಾಮುನಿಗೆ ಬಸವಣ್ಣನ ದರ್ಶನ ಪಡೆಯಲು ಅಣುವಮಾಡಿ ಕೊಟ್ಟರು.

ಸಿದ್ಧರಾಮನು ಪ್ರಭುವನ್ನು ಸಂಧಿಸುವುದಕ್ಕೆ ಮುಂಚೆ ಅವನ ಶಿಷ್ಯರು ಪ್ರಭುವನ್ನು ನಿಂದಿಸಿ ಕಲ್ಲಿನಿಂದಹೊಡೆದುದಲ್ಲದೆ ಅವನ ಮೇಲೆ ಚಾಡಿಮಳೆ ಸುರಿದರು ಆಗ ಸಿದ್ಧರಾಮನೆ ಪ್ರಭುವಿನಬಳಿಗೆ ಬಂದು ಚರ್ಚಿಸಿ ತನ್ನ ಕೋಪದ ಕಣ್ಣನ್ನು ತೆರೆದ. ಆಗಪ್ರಭು ಸಿದ್ಧರಾಮ ನಿನ್ನಕೋಪದ ಜೆಂಕಿ ನನ್ನನ್ನು ಸುಡಲಾರದೆಂದು ಹೇಳಿ ಈ ವಚನವನ್ನು ಉಲ್ಲೇಖಿಸಿದರು.

ವಚನ-46 ತಾಪತ್ರಯದಲ್ಲಿ ಬೆಂದ ಒಡಲ ಯಿಡಿದು ತಂದು
ಜ್ಞಾನವೆಂಬ ಉರಿಗೆ ಆಹುತಿಯು ಕೊಟ್ಟವನ,
ಜ್ಞಾನವೆಂಬ ಕಾಯವ ಹಿಡಿದು ನಿಶ್ಶೂನ್ಯವೆಂಬ ತೇಜದಲ್ಲಿ
ಸುಟ್ಟವನ: ನಿಶ್ಶೂನ್ಯವೆಂಬ ಶಬ್ದವ ಸುಟ್ಟು ಭಸ್ಮವ
ಧರಿಸಿದ ಲಿಂಗೈಕ್ಯನ; ಲೋಕದಸ್ಥಿತಿಗತಿಯು ಮರೆದು
ನಿರ್ವಾಣದಲ್ಲಿ ನಿಂದವನ; ಗುಹೇಶ್ವರ ಲಿಂಗದಲ್ಲಿ ತನ್ನ
ಮರೆದ ಅಲ್ಲಯ್ಯನ, ಕೋಪದ ಕಿಚ್ಚಿನಲ್ಲಿ ಸುಟ್ಟಹೆನೆಂಬ
ಸಿದ್ಧರಾಮಯ್ಯನೇನೆಂಬೆನು !

ಎಂದು ನಗುತ್ತ ಆನತ ಕೋಪದ ಕಣ್ಣುರಿಯ ಬೇಗೆಯನ್ನು ತನ್ನ ಅಚಲ ಶಾಂತಿಯ ಅಂಗಾಲಿನಲ್ಲಿ ಅಡಗಿಸಿಕೊಂಡನು,

ಮುಂದೆ ಪ್ರಭುದೇವರು, ಆದರೆ ಸಿದ್ಧರಾಮಯ್ಯ ಒಂದು ಮಾತನ್ನು ಹೇಳ ಬೇಕಾಗಿದೆ; ನನ್ನಯೋಗ ನೀನು ಹೇಳುವ ನಿಲವನ್ನು ಇನ್ನೂ ನಿನಗೆ ತಂದು ಕೊಟ್ಟಿಲ್ಲ. ತದುಗತವಾಗಿದ್ದೇನೆಂಬುದು ನಿನ್ನ ಮಾತಿನಲ್ಲಿ ಕಂಡುಬರುತ್ತದೆಯೇ ಹೊರತು ಕೃತಿಯಲ್ಲಿ ಅಳವಟ್ಟಿಲ್ಲ, ಇದೇನು ಈ ದೇವಾಲಯಗಳ ನಿರ್ಮಾಣ. ಈ ಕೆರೆಯ ಕಟ್ಟಡ ! ಕಾಯವೇಲಿಂಗ, ಪ್ರಾಣವೇ ಶರಣನಾದ ಶರಣಂಗೆ ಬೇರೆದೇವಾಲಯವ ಮಾಡಬೇಕೆ ? ಎಂದು ಈ ವಚನ ನುಡಿದರು.

ವಚನ–47. ಅನ್ನವನಿಕ್ಕಿ ನನ್ನಿಯ ನುಡಿದು
ಅವರವಟ್ಟಿಗೆಯನಿಕ್ಕಿ ಕೆರೆಯ ಕಟ್ಟಿಸಿದರೆ,
ಮರಣದಿಂದ ಮೇಲೆ ಸ್ವರ್ಗಉಂಟಲ್ಲದೆ
ಶಿವನ ನಿಜವು ಸಾಧ್ಯವಾಗದು
ಗುಹೇಶ್ವರನ ನರಿದ ಬಳಿಕ ಶರಣಂಗೆ ಅವಫಲವೂ ಇಲ್ಲ. ಮತ್ತೂ ಹೇಳಿದ್ಯ

ವಚನ-48. ಕೆರೆದೇಗುಲಂಗಳೆಲ್ಲವೂ ಹಿಂದಣ ಅಡಿವಚ್ಚಿಗೆ ರೂಪು.
ಕರ್ಮಕಾಂಡ ಯೋಗಂಗಳೆಲ್ಲವೂ ಭವದ ತೆಕ್ಕೆಗೆ ಬಳಗು,
ಹಿಂದಣ ಮುಂದಣ ಸಂದನಳಿದು
ಗುಹೇಶ್ವರ ಲಿಂಗದಲ್ಲಿ ಸಲೆಸಂದಿರಬೇಕು ಸಿದ್ದರಾಮಯ್ಯಾ.

ಇದನ್ನು ಕೇಳಿದ ಸಿದ್ದರಾಮ ಕ್ಷಣಕಾಲ ಆಲೋಚನಾ ಮಗ್ನನಾದ. ಮುಂದೆ ಪ್ರಭುವು ಹೇಳ ತೊಡಗಿದರು. ನಿಜಹಸಿವು ಹರಿಯುವುದಕ್ಕೆ ಕೃಷಿಯೇ ಮಾಡಬೇಕು. ಆದರೆ ಬೆಳೆದುದನ್ನು ಅಟ್ಟುಣ್ಣಬೇಕಲ್ಲವೇ? ನಾನು ಒಂದು ಕೆರೆಯನ್ನು ಕಟ್ಟಿದ್ದೇನೆ ನೋಡು ಎಂದು ಹೇಳಿ ಈ ವಚನ ನುಡಿದರು.

ವಚನ-49. ತನುವೆಂಬ ಏರಿಗೆ ಮನವೆಂಬಕಟ್ಟೆ, ಆಚಾರವೆಂಬ ಸೋಪಾನ;
ಪರಮಾನಂದವೆಂಬ ಜಲವ ತುಂಬಿ ಕೆರೆಯ ಕಟ್ಟಬಲ್ಲವರ ನಾರನೂಕಾಣೆ;
ನಾಕಟ್ಟಿದ ಕೆರೆ ಸ್ಥಿರವಾಯಿತು ಗುಹೇಶ್ವರ
ನಿಮ್ಮಾಣೆ-ಇಂತಹ ಕೆರೆ ಕಟ್ಟಬೇಕು ಎಂದಾಗ

ಮನದಲ್ಲಿ ನೆನೆದು ಮಾಡುವುದೆಲ್ಲವೂ ಕಾಯದ ಕರ್ಮವಲ್ಲವೇ ? ಭಾವಶುದ್ಧಿಯನ್ನರಿಯುವ ಪರಿಇನ್ನಾವುದು ? ;

"ಒಳ್ಳೆಯ ಪ್ರಶ್ನೆ ಸಿದ್ದರಾಮಯ್ಯ" ಪ್ರಭುದೇವ ಮೆಚ್ಚಿನುಡಿದ, ಮತ್ತೂ ಹೇಳಿದ

ವಚನ–50. ಚಿನ್ನವ ನೊರೆಯಬಹುದಲ್ಲದೆ, ಬಣ್ಣವ ನೊರೆಯಬಹುದೇ ?
ಹೂವ ಮುಡಿಯಬಹುದಲ್ಲದೆ, ಗಂಧವ ಮುಡಿಯಬಹುದೇ ?
ಕರ್ಮವ ಮಾಡಬಹುದಲ್ಲದೇ, ವಸ್ತುವನ್ನರಿಯಬಹುದೇ ?
ಗುಹೇಶ್ವರ ನೆನಬಹುದಲ್ಲದೆ, ಲಿಂಗವು ತಾನಾಗಬಾರದು ಸಿದ್ಧರಾಮಯ್ಯಾ;

ಹೀಗೆ ಚಿನ್ನಅಳಿದು ಬಣ್ಣ ಉಳಿಯಬೇಕು. ಹೂವು ಅಳಿದು ಸುವಾಸನೆ ಉಳಿಯಬೇಕು. ಕರ್ಮಅಳಿದು ವಸ್ತು ಉಳಿಯಬೇಕು–ಎಂದು ಬೋಧಿಸಿದರು.

(ಮುಂದುವರಿಯುವುದು) ○

# ಗಿನ್ನೆಸ್ ದಾಖಲೆ ನಿರ್ಮಿಸಿದ ಪ್ರಖ್ಯಾತ ನೇತ್ರತಜ್ಞ ಪದ್ಮಭೂಷಣ ಡಾ॥ ಎಂ. ಸಿ. ಮೋದಿ.

ಎಚ್. ಎಸ್. ಸಿದ್ಧಗಂಗಪ್ಪ, ಎಂ.ಎ., 53/1, ಶಿವಕೃಪ, 1ನೇ ಮುಖ್ಯರಸ್ತೆ, ಕಾವೇರಿ ಬಡಾವಣೆ, ನಾಗರಭಾವಿ ರಸ್ತೆ ವಿಜಯನಗರ, ಬೆಂಗಳೂರು-560040.

ಜನರೇ ನನ್ನ ದೇವರು ಆಪರೇಷನ್ ಕೊಠಡಿಯೇ ದೇವಾಲಯ. ಬಳಸುವ ಉಪಕರಣಗಳೇ ನನ್ನ ಪೂಜಾ ಸಾಮಗ್ರಿಗಳು ; ಎಂದವರು ವಿಶ್ವವಿಖ್ಯಾತ ನೇತ್ರ ತಜ್ಞ ಅನುಭಾವಿ, ಕನ್ನಡಿಗ, ಪದ್ಮಭೂಷಣ. ಡಾ॥ ಎಂ. ಸಿ. ಮೋದಿಅವರು.

ಡಾ॥ ಮೋದಿಯವರದು ಅವಿರತ ದುಡಿಮೆ. ಸದಾ ಚೈತನ್ಯದ ಬುಗ್ಗೆ, ಪಾದರಸ. ಬಸವಣ್ಣನವರು ನಡೆದು ತೋರಿಸಿದ ಕಾಯಕವೇ ಕೈಲಾಸ ಎಂಬ ತತ್ವ ಅವರ ಬಾಳಿಗೆ ಆದರ್ಶ. ಸದ್ದು, ಗದ್ದಲ, ಆಡಂಬರ ಡಂಭಾಚಾರವಿಲ್ಲದೆ ಕಾಯಕಕ್ಕೆ ತನ್ನನ್ನು ಅರ್ಪಿಸಿಕೊಂಡ ಕರ್ಮಯೋಗಿ.

1916ರ ಅಕ್ಟೋಬರ್ 4 ರಂದು ಬಿಜಾಪುರ ಜಿಲ್ಲೆಯ ಲೋಕಾಪುರ ಗ್ರಾಮದಲ್ಲಿ ಶ್ರೀಮಂತ ವ್ಯಾಪಾರಿ ಕುಟುಂಬದಲ್ಲಿ ಜನನ. ತಂದೆ ಚೆನ್ನವೀರಪ್ಪ. ತಾಯಿದುಂಡಮ್ಮ. ಹುಟ್ಟಿದಾಗ ಈತನು ಮುಂದೆ ವಿಶ್ವ ಪ್ರಖ್ಯಾತನಾದ ನೇತ್ರ ವೈದ್ಯ ನಾಗುತ್ತಾನೆಂದು ಯಾರೂ ಎಣಿಸಿರಲಿಲ್ಲ. ತಕ್ಕಡಿ ಹಿಡಿಯಬೇಕಾದ ಕೈ ಸೂಕ್ಷ್ಮವಾದ ಶಸ್ತ್ರಗಳನ್ನು ಹಿಡಿಯುವಂತಾದುದು ವಿಧಿಲೀಲೆ. ವಿಶ್ವದ ಅಸಂಖ್ಯಾತ ಅಂಧರ ಸೇವೆ ಮಾಡಲು ಮಗನನ್ನು ಅರ್ಪಿಸಿದ ಆ ಹೆತ್ತ ತಾಯಿಯ ಒಡಲು ನಿಜಕ್ಕೂ ಧನ್ಯ.

ಮುಂಬಯಿ ನೇತ್ರ ಚಿಕಿತ್ಸಾಲಯದಲ್ಲಿ ನೇತ್ರ ವೈದ್ಯ ವಿಜ್ಞಾನದಲ್ಲಿ ಶಿಕ್ಷಣ ಪಡೆದರಲ್ಲದೆ ನ್ಯೂಯಾರ್ಕ್, ಕೊಲಂಬಿಯಾ ವಿಶ್ವವಿದ್ಯಾನಿಲಯಗಳಲ್ಲಿ ಉನ್ನತ ಶಿಕ್ಷಣಪಡೆದ ಪ್ರತಿಭಾವಂತ.

ಸರಳತೆ, ಸಜ್ಜನಿಕೆ, ಕರುಣೆ, ಹೃದಯವಂತಿಕೆ, ಸೇವಾ ಮನೋಭಾವ, ನಿಸ್ವಾರ್ಥತೆ, ಇವುಗಳೆಲ್ಲದರ ಸಾಕಾರಮೂರ್ತಿಯೇ ಡಾ॥ ಮೋದಿ. ಈಎಲ್ಲಾ ಗುಣಗಳು ಒಬ್ಬ ವ್ಯಕ್ತಿಯಲ್ಲಿ ಮೇಳೈಸುವುದು ತುಂಬಾ ಅಪರೂಪ. ಮಹಾತ್ಮ ಗಾಂಧಿ-ಯವರನ್ನು ಹತ್ತಿರದಿಂದ ಕಂಡು, ಪ್ರಾರ್ಥನಾ ಸಭೆಗಳಲ್ಲಿ ಭಾಗವಹಿಸಿ ವ್ಯಕ್ತಿತ್ವಕ್ಕೆ ಮನಸೋತು, ಆದರ್ಶಕ್ಕೆ ಶರಣಾಗಿ ಗಾಂಧಿಯವರ ಆಣತಿಯಂತೆ ದೇಶ ಸೇವೆಗೆ ಅರ್ಪಿಸಿಕೊಂಡ ಮಂಗಳಮೂರ್ತಿ.

ಡಾ॥ ಮೋದಿಯವರು ಉಚಿತ ನೇತ್ರ ಚಿಕಿತ್ಸೆಯ ಸೇವೆಯನ್ನು 1943ರಲ್ಲಿ ಪ್ರಾರಂಭಿಸಿದರು. ಅಂದಿನಿಂದ ಇಂದಿನವರೆಗೂ ನಿರಂತರವಾಗಿ ನಡೆಸಿಕೊಂಡು ಬಂದಿದ್ದಾರೆ, ಇದುವರೆಗೆ ದೇಶದ ಮೂಲೆ ಮೂಲೆಗಳಲ್ಲಿ ವಿಶ್ವದ ನಾನಾ ಭಾಗಗಳಲ್ಲಿ ಉಚಿತ ನೇತ್ರ ಚಿಕಿತ್ಸಾ ಶಿಬಿರಗಳನ್ನು, ಏರ್ಪಡಿಸಿ ಸುಮಾರು 50 ಲಕ್ಷ ಜನರ ಕಣ್ಣುಗಳ ಪರೀಕ್ಷೆ ಮಾಡಿ 6 ಲಕ್ಷಕ್ಕೂ ಹೆಚ್ಚು ಜನರ ಕಣ್ಣುಗಳ ಶಸ್ತ್ರ ಚಿಕಿತ್ಸೆ ನಡೆಸಿದ್ದಾರೆ. ವಿಶ್ವದಲ್ಲೇ ಹೆಚ್ಚು ಕಣ್ಣುಗಳ ಶಸ್ತ್ರ ಚಿಕಿತ್ಸೆ ಮಾಡಿದ ಹೆಗ್ಗಳಿಕೆ. ಗಿನ್ನೆಸ್ ಪುಸ್ತಕದಲ್ಲಿ ದಾಖಲಿಸಿದ ಕೀರ್ತಿ. ಇದು ಕರ್ನಾಟಕಕ್ಕೆ ತಂದ ಗೌರವ. ಇಂಥ ಮಹಾ ಮೇಧಾವಿ, ಕರ್ನಾಟಕದವರು ಎಂದು ಹೇಳಿಕೊಳ್ಳುವಲ್ಲಿ ತುಂಬಾ ಅಭಿಮಾನ.

ಡಾ॥ ಮೋದಿಯವರು ಏನೋ ಒಂದು ರೀತಿಯ ಮೋಡಿ. ಅವರು ಕಣ್ಣಿನ ಆಪರೇಷನ್ ಮಾಡುವಲ್ಲಿ ತೋರುವ ಚಾಕಚಕ್ಯತೆ ನೈಪುಣ್ಯತೆ ವೈದ್ಯಕೀಯ ಕ್ಷೇತ್ರದಲ್ಲೇ ಬೆರಗುಗೊಳಿಸುವಂತಹದು. ಒಂದೇ ದಿನದಲ್ಲಿ 837 ಶಸ್ತ್ರ ಚಿಕಿತ್ಸೆಯನ್ನು ಮಾಡಿದ ವಿಶ್ವದಾಖಲೆ.

ಶಿಸ್ತು, ದಕ್ಷತೆ, ಪ್ರಾಮಾಣಿಕತೆಗೆ ಮತ್ತೊಂದು ಹೆಸರು ಡಾ॥ ಎಂ. ಸಿ. ಮೋದಿ ರೋಗಿಗಳ ದಾಖಲಾತಿಯಿಂದ ಹಿಡಿದು ಶಸ್ತ್ರ ಚಿಕಿತ್ಸೆಗೆ ಗುರಿಪಡಿಸಿ ರೋಗಿಗಳ ಮನೆಗೆ ಹಿಂದಿರುಗುವವರೆಗೆ ಎಲ್ಲವೂ ಅಚ್ಚುಕಟ್ಟು, ಯಾವುದೇ ಹಂತದಲ್ಲಿ ಸ್ವಲ್ಪ, ಏರುಪೇರಾದರೂ ಸಹಿಸುವುದಿಲ್ಲ. ಸಿಬ್ಬಂದಿಯವರು ಅಷ್ಟೇ ರೋಗಿಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿಕೊಳ್ಳುತ್ತಾರೆ. ನಿಸ್ವಾರ್ಥ ಸೇವೆ ಪ್ರಾಮಾಣಿಕ ದುಡಿಮೆ ಅವರಿಗೆ ಮೋದಿಯವರಿಂದ ಬಂದ ಬಳುವಳಿ. ತಾಯಿಯಂತೆ ಮಗಳು ನೂಲಿನಂತೆ ಸೀರೆ.

ವಿದೇಶಗಳಲ್ಲಿ ಮೋದಿಯವರ ಬಗ್ಗೆ ತುಂಬಾ ಗೌರವ ಅಭಿಮಾನ. ಅವರ ಪ್ರತಿಭೆಗೆ ಶರಣಾದ ಅಮೇರಿಕಾದವರು: ನೇತ್ರ ಚಿಕಿತ್ಸೆಯ ಶ್ರೇಷ್ಠ ಶಿಲ್ಪ. ಸಾಮೂಹಿಕ ನೇತ್ರ ಚಿಕಿತ್ಸೆಯ 'ಏಕಮೇವಾದ್ವಿತೀಯ ವ್ಯಕ್ತಿ ಎಂದು ಹಾಡಿ ಹೊಗಳಿದರೆ. ರಷ್ಯಾದವರು" ನೇತ್ರ ಶಸ್ತ್ರ ಚಿಕಿತ್ಸೆಯ ಮೋಡಿಕಾರ ಎಂದು ಪ್ರಶಂಸಿದ್ದಾರೆ, ಅವರ ನಿಸ್ವಾರ್ಥ ಸೇವೆಯನ್ನು ಹತ್ತಿರದಿಂದ ನೋಡಿದ ವಿದೇಶದವರು ಶಸ್ತ್ರ ಚಿಕಿತ್ಸೆಗೆ ಬೇಕಾದ ಶ್ರೇಷ್ಠ ಗುಣಮಟ್ಟದ ಉಪಕರಣಗಳು' ಕನ್ನಡಕ, ಔಷಧಿಗಳನ್ನು ಉಚಿತವಾಗಿ ಕಳುಹಿಸಿ ಮೋದಿಯವರು ನಡೆಸುವ ನೇತ್ರ ಯಜ್ಞದಲ್ಲಿ ಪರೋಕ್ಷವಾಗಿ ಭಾಗಿಯಾಗುತ್ತಿದ್ದಾರೆ.

ಡಾ॥ ಮೋದಿಯವರೆಂದರೆ ಗ್ರಾಮೀಣ ಜನತೆಗೆ ಬಲು ಅಚ್ಚುಮೆಚ್ಚು. ಅವರು ನಡೆಸುವ ಶಿಬಿರಗಳಿಗೆ ಜನ ಇರುವೆಗಳ ಸಾಲಿನಂತೆ ಬರುತ್ತಾರೆ. ಹತ್ತಾರು ನೇತ್ರ ವೈದ್ಯರಿಗೆ ತೋರಿಸಿದರೂ ಅವರಿಗೆ ಸಮಾಧಾನವಿಲ್ಲ. ಒಮ್ಮೆ ಮೋದಿಯವರಿಗೆ ತಮ್ಮ ಕಣ್ಣುಗಳನ್ನು ತೋರಿಸಬೇಕೆಂಬ ಉತ್ಕಟವಾದ ಬಯಕೆ. ಪರೀಕ್ಷಿಸಿಕೊಂಡ ಮೇಲೆ

ನೆಮ್ಮದಿ. ಮುಖದಲ್ಲಿ ಸಂತೃಪ್ತಿಯ ಭಾವನೆ. ಆಪರೇಷನ್ ಮಾಡಿಸಿಕೊಂಡು ಮತ್ತೆ ದೃಷ್ಟಿ ಪಡೆದವರು ಅವರನ್ನು ಕರೆಯುವುದು" ಕಣ್ಣು ಕೊಟ್ಟ ಅಣ್ಣ ನೆಂದು. ಮೋದಿಯವರು ಒಬ್ಬರಿಗೆ ಅಣ್ಣನಲ್ಲ. ಲಕ್ಷಾಂತರ ಜನಗಳಿಗೆ ಅಣ್ಣ. ಎಷ್ಟು ಜನಕ್ಕೆ ಇಂದ ಸುಯೋಗ !

ಡಾ॥ ಮೋದಿಯವರದು ಆದರ್ಶಕುಟುಂಬ, ಶರಣೆ ಲೀಲಾವತಿ ಅವರನ್ನು ಕೈಹಿಡಿದ ಧರ್ಮಪತ್ನಿ, ಅನುರೂಪದ ದಾಂಪತ್ಯ ಜೋಡಿ, ಕೀರ್ತಿಗೊಬ್ಬನೇ ಮಗ ಅವರೂ ನೇತ್ರ ತಜ್ಞ. ತಂದೆ ಮಾಡುವ ಕಾಯಕದಲ್ಲಿ ಭಾಗಿಯಾಗುತ್ತಿದ್ದಾರೆ. ಮೋದಿಯವರಿಗೆ ತಾನು ಕೈಹಿಡಿದ ಪತ್ನಿಯ ಸಹಕಾರ, ತ್ಯಾಗದ ಫಲವಾಗಿ ಅಸಂಖ್ಯಾತ ಕುರುಡರಸೇವೆ ಮಾಡಲು ಅವಕಾಶವಾಯಿತು. ತನ್ನ ಸಂಸಾರದ ಹಿತಕ್ಕಿಂತ ಲೋಕದ ಹಿತ ಬಹು ಮುಖ್ಯ ಎಂಬುದನ್ನು ಅರಿತುಕೊಂಡು ಸಮಾಜದ ಸೇವೆಗೆ ತನ್ನ ಗಂಡನನ್ನು ಅರ್ಪಿಸಿದ ಮಹಾಸಾಧ್ವಿ.

## ವಿಶ್ವ ನಾಯಕರ ದೃಷ್ಟಿಯಲ್ಲಿ ಮೋದಿ

ಮೋದಿಯವರದು ಅಪರೂಪದ ಅಸಾಮಾನ್ಯ ವ್ಯಕ್ತಿತ್ವ. ವಿಶ್ವದ ನಾಯಕರು ಪತ್ರಿಕೆಗಳು, ಅವರ ವ್ಯಕ್ತಿತ್ವವನ್ನು ತಮ್ಮದೇ ಆದ ರೀತಿಯಲ್ಲಿ ಬಣ್ಣಿಸಿದ್ದಾರೆ. ಅವುಗಳ ಕೆಲವನ್ನು ನೋಡೋಣ. ಮೋದಿಯವರು ದೇವರ ಸೇವೆಗೆ ಬಂದ ಮಾಂತ್ರಿಕ ನಿಷ್ಕಾಮ ಕರ್ಮಯೋಗಿ, ಮಹಾನ್ ಸಮಾಜ ಸೇವಕ, ನೇತ್ರ ದೃಷ್ಟಿಯ ತಾರಕ ಶಕ್ತಿ. ಕುರುಡರ ಬಾಳಿನ ಬೆಳಕು. ಪ್ರಾಯೋಗಿಕ ತತ್ವಜ್ಞಾನಿ. ಸರ್ವಸಮರ್ಪಣ ಭಾವದ ಸಾರ್ವಜನಿಕ ವ್ಯಕ್ತಿ. ವೈದ್ಯಕೀಯ ಕಲಾವಿದ. ಸವ್ಯಸಾಚಿ. ನೇತ್ರ ವೈದ್ಯಕೀಯದ ಕುಶಲ ಶಿಲ್ಪಿ, ಕ್ರಾಂತಿಕಾರಿ, ಪವಾಡ ಪುರುಷ, ಇತ್ಯಾದಿಯಾಗಿ ವರ್ಣಿಸಿದ್ದಾರೆ. ಅವರ ವ್ಯಕ್ತಿತ್ವ ಒಂದು ಅಕ್ಷಯ ಪಾತ್ರೆ ಇದ್ದಂತೆ.

### ಪ್ರಶಸ್ತಿ

ಡಾ॥ ಮೋದಿಯವರಿಗೆ ಸಂದ ಗೌರವ, ಪ್ರಶಸ್ತಿಗಳಿಗೆ ಲೆಕ್ಕವಿಲ್ಲ. ಪ್ರಶಸ್ತಿಗಳು ಪೈಪೋಟಿಯ ಮೇಲೆ ತಾನುಮುಂದು ತಾನು ಮುಂದೆಂದು ಹುಡುಕಿಕೊಂಡು ಬಂದವು ಬೇಡವೆಂದರೂ ಬಿಡಲಿಲ್ಲ. ಬೆನ್ನತ್ತಿದಂತೆ. ಇದರಿಂದ ಮೋದಿಯವರಿಗಿಂತ ಪ್ರಶಸ್ತಿಗಳಿಗೆ ಹೆಚ್ಚು ಘನತೆ ಬಂದಿತು. ಆದರೆ ಪ್ರಶಸ್ತಿಗಳು ಮೋದಿಯವರ ಮೇಲೆ ಯಾವ ಪರಿಣಾಮವನ್ನು ಬೀರಲಿಲ್ಲ. ಅವರದು ನಿರ್ಲಿಪ್ತ ವ್ಯಕ್ತಿತ್ವ. ಬಾಹುಬಲಿಯಷ್ಟೇ ಅಚಲ. ತುಂಬಿದ ಕೊಡ. ಅವರಿಗೆ ಸಂದ ಪ್ರಶಸ್ತಿಗಳೆಲ್ಲವನ್ನು ಇಲ್ಲಿ ದಾಖಲಿಸುವುದು ಕಷ್ಟ. ಮುಖ್ಯವಾಗಿ ಕೆಲವನ್ನು ಹೆಸರಿಸಬಹುದು.

ಕರ್ನಾಟಕ ಹಾಗೂ ಮೈಸೂರು ವಿಶ್ವವಿದ್ಯಾಲಯಗಳಿಂದ ಗೌರವ ಡಾಕ್ಟರೇಟ್ ಪದವಿ. ಕರ್ನಾಟಕ ಸರ್ಕಾರದ ಸೇವಾ ಪ್ರಶಸ್ತಿ. "1956ರಲ್ಲಿ ಭಾರತ ಸರ್ಕಾರದಿಂದ "ಪದ್ಮ ಶ್ರೀ. 1968ರಲ್ಲಿ, ಪದ್ಮಭೂಷಣ" ಪ್ರಶಸ್ತಿ. ಯು. ಎಸ್. ಎ. ಲಯನ್ಸ್, ಇಂಟರ್ ನ್ಯಾಷನಲ್ ಸಂಸ್ಥೆಯಿಂದ. ದೃಷ್ಟಿರಹಿತರಸಂತನೆಂಬ" ಗೌರವ. ಅಲ್ಲದೆ ಈ ವರ್ಷ (1989) ಫೆಬ್ರವರಿಯಲ್ಲಿ "ಮಾನವತಾದಿ" ಪ್ರಶಸ್ತಿ. ನೀಡಿಕೆ, ಈ ಪ್ರಶಸ್ತಿ ಒಬ್ಬ ವ್ಯಕ್ತಿ ತನ್ನ ಇಡೀ ಜೀವಮಾನವನ್ನು ಮಾನವರ ಕಲ್ಯಾಣಕ್ಕಾಗಿ ಧಾರೆ ಎರೆದ ಮಹಾವ್ಯಕ್ತಿಗೆ ನೀಡುವ ಅತ್ಯುನ್ನತ ಗೌರವವಾಗಿದೆ. "ನಾನು ಪದೇ ಪದೇ ನೆನೆಯುತ್ತಿರುವ ವಿಭೂತಿ ಪ್ರಮಾಣದ ಜೀವಂತ ವ್ಯಕ್ತಿಗಳಲ್ಲಿ ಒಬ್ಬರು ಸಂತ ವಿನೋಬಾಜಿ, ಮತ್ತೊಬ್ಬರು ಡಾ॥ ಮೋದಿ (1982) ಎನ್ನುವ ರಾಷ್ಟ್ರಕವಿ, ದಾರ್ಶನಿಕ, ಡಾ॥ ಕುವೆಂಪುವರ ಮಾತು ಡಾ॥ ಮೋದಿಯವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ.

ಕರ್ನಾಟಕ ಸರ್ಕಾರ ಡಾ। ಮೋದಿಯವರು ಸಮಾಜಕ್ಕೆ ಸಲ್ಲಿಸಿದ ಅನುಪಮ ಸೇವೆಯನ್ನು ಗುರುತಿಸಿ ವಿಧಾನಪರಿಷತ್ತಿನ ಸದಸ್ಯರಾಗಿ ನಾಮಕರಣ ಮಾಡಿ ತನ್ನ ಘನತೆಯನ್ನು ಹೆಚ್ಚಿಸಿಕೊಂಡಿದೆ. ಇತ್ತೀಚಿಗೆ ಮಾನವ ಕಲ್ಯಾಣಕ್ಕೆ ಸಲ್ಲಿಸಿದ ಸೇವೆ-ಯನ್ನು ಗುರುತಿಸಿದ ಮಹಾರಾಷ್ಟ್ರ ಸರ್ಕಾರ ಅತ್ಯುನ್ನತ ಪ್ರಶಸ್ತಿಯಾದ "ಧನ್ವಂತರಿ' ಯನ್ನುನೀಡಿ ಗೌರವಿಸಿದೆ.

ಮೋದಿಯವರು ಮೃದು ಭಾಷಿ, ಮಾತಿಗಿಂತ ಕೆಲಸಕ್ಕೆ ಹೆಚ್ಚು ಮಹತ್ವ. ಇಂಥವರು ನಮ್ಮಲ್ಲಿ ಎಷ್ಟು ಮಂದಿ ಇದ್ದಾರೆ ? ಮಾತು ಬೆಳ್ಳಿಯಾದರೆ ಮೌನ ಚಿನ್ನ. ತಿಂಗಳಿಗೆ ಸರಾಸರಿ ಮೂರು ಶಿಬಿರಗಳನ್ನು ನಿರಾಯಾಸವಾಗಿ ನಡೆಸುವ ಮೋದಿಯವರು ಸದಾ ಉತ್ಸಾಹದ ಚಿಲುಮೆ. ಅವರಿಗೆ ಇದುವರೆಗೂ ಯಾವ ಹಬ್ಬ ಯಾವಾಗ ಬರುತ್ತದೆ ಎಂಬುದು ಗೊತ್ತಿಲ್ಲ. ಶಿಬಿರ ನಡೆಯುವ ದಿನಗಳೇ ಅವರ ಪಾಲಿಗೆ ಹಬ್ಬ. ರೋಗಿಗಳಿಗೆ ಮಾಡುವ ಸೇವೆಯೇ ದೇವರಿಗೆ ಸಲ್ಲಿಸುವ ಪೂಜೆ.

ಅವರಿಗೆ ನಮ್ಮ ನಾಡು, ನುಡಿ, ಕಲೆ, ಸಾಹಿತ್ಯ, ಸಂಸ್ಕೃತಿಯ ಬಗ್ಗೆ ಅಪಾರ ಅಭಿಮಾನ, ಕಳಕಳಿ, ಭವ್ಯ ಪರಂಪರೆಯನ್ನು ಹೊಂದಿರುವ ನಾಡು ನುಡಿಯ ಬಗ್ಗೆ ಅಭಿಮಾನವನ್ನು ಗೌರವವನ್ನು ಬೆಳೆಸಿಕೊಳ್ಳಬೇಕೆನ್ನುತ್ತಾರೆ. "ನಾನು ಯಾವುದೇ ದೇಶದಲ್ಲಿದ್ದರೂ ಸದಾ ನನ್ನ ಮನಸ್ಸು ತಾಯಿ ನಾಡಿನ ಬಗ್ಗೆ ತುಡಿಯುತ್ತಿರುತ್ತದೆ" ಎನ್ನುತ್ತಾರೆ.

ವಿಶ್ವದ ಇತರೆ ರಾಷ್ಟ್ರಗಳಿಗೆ ಹೋಲಿಸಿದರೆ ಭಾರತದಲ್ಲಿ ಹೆಚ್ಚು ಜನ ಅಂಧತ್ವ-ದಿಂದ ನರಳುತ್ತಿದ್ದಾರೆ. ಇದಕ್ಕೆ ಡಾ॥ ಮೋದಿಯವರು ಕೊಡುವ ಕಾರಣ, ತಾಂಡ-ವಾಡುತ್ತಿರುವ ಬಡತನ, ಅಪೌಷ್ಟಿಕ ಆಹಾರ, ಸೂಕ್ತ ಚಿಕಿತ್ಸೆಯ ಕೊರತೆ, ಇದನ್ನು ಮನಗಂಡ ಅವರು ಶಿಬಿರಗಳನ್ನು ನಡೆಸಲು ಪ್ರಾರಂಭಿಸಿದರು. ಶಿಬಿರಗಳನ್ನು ನಡೆಸುವ ಹಿನ್ನೆಲೆ ಅವರು ಕೊಡುವ ಉತ್ತರ "ಭಾರತದ ಬಡ ಜನ ನಮ್ಮಲ್ಲಿಗೆ ಬರುವುದು ಸಾಧ್ಯವಿಲ್ಲ. ಆದ್ದರಿಂದ ನಾನೇ ಅವರ ಬಳಿಗೆ ಹೋಗುತ್ತೇನೆ. ಎಂಥ ಉದಾತ್ತ ಗುಣ. ನಾಗರಿಕ ಸೌಲಭ್ಯಗಳಿಂದ ವಂಚಿತರಾದ ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚು ಹೆಚ್ಚು ಶಿಬಿರಗಳನ್ನು ಏರ್ಪಡಿಸುವುದರಮೂಲಕ ಅಸಂಖ್ಯಾತ ನತದೃಷ್ಟ ಅಂಧರ ಸೇವೆಯನ್ನು ಮಾಡುತ್ತಿರುವ ಮಾನವತಾದಿ.

ಮೋದಿಯವರಲ್ಲಿರುವ ಕ್ರಿಯಾಶೀಲತೆ ಅವರನ್ನು ಸುಮ್ಮನೆ ಕೂರಲು ಬಿಡು-ವುದಿಲ್ಲ. ಕಾಯಕ ನಿಷ್ಠರಾಗಿರುವ ಅವರಿಗೆ ಬಿಡುವೆಂಬುದೇ ಇಲ್ಲ. ಒಂದು ವೇಳೆ ಬಿಡುವುಸಿಕ್ಕಿದರೂ ಅವರ ಮನಸ್ಸು ಮಾನವ ಕಲ್ಯಾಣಕ್ಕೆ ಸದಾ ತುಡಿಯುತ್ತಿರುತ್ತದೆ. ಅವರ ಮುಂದಿನ ಯೋಜನೆ ನಿರಾಶ್ರಿತರಿಗೆ ಪುನರ್ವಸತಿಯನ್ನು ಕಲ್ಪಿಸುವುದು, ಹಾಗೂ ಅಂಗವಿಕಲರು ಸಮಾಜದಲ್ಲಿ ಇತರರಂತೆ ಬಾಳಲು ಸೂಕ್ತ ಅವಕಾಶವನ್ನು ಒದಗಿಸಿ ಕೊಡುವುದು, ಅವರೇ ಸ್ಥಾಪಿಸಿದ ಚಾರಿಟಬಲ್ ಟ್ರಸ್ಟ್‌ನ ಮುಖ್ಯ ಉದ್ದೇಶ. ಕುರುಡರ ಬಗ್ಗೆ ನಾವು ಅನುಕಂಪ ತೋರಬೇಕಾಗಿಲ್ಲ. ಅವರು ಸಮಾಜದಲ್ಲಿ ಇತರರಂತೆ ಬಾಳಲು ಅವಕಾಶವನ್ನು ಕಲ್ಪಿಸಿಕೊಡಬೇಕಾಗುದುದು ಪ್ರತಿಯೊಬ್ಬ ಗಣ್ಯ ನಾಗರೀಕನ ಕರ್ತವ್ಯ ಎನ್ನುತ್ತಾರೆ. ಡಾ॥ ಮೋದಿಯವರು ಸಾವಿನಲ್ಲೂ ಕೂಡ ಕುರುಡರ ಸೇವೆ ಮಾಡಬೇಕೆಂದು ನಿರ್ಧರಿಸಿದ್ದಾರೆ. ಅವರು ಮರಣ ಹೊಂದಿದ ಕೂಡಲೇ ಅವರ ಕಣ್ಣುಗುಡ್ಡೆಗಳನ್ನು ತೆಗೆದು ಕಣ್ಣಿನಬ್ಯಾಂಕ್‌ನಲ್ಲಿಡಬೇಕೆಂದು ಮರಣಶಾಸನ ಬರೆದಿದ್ದಾರೆ. ದೇವರಿಗೆ ಕಣ್ಣನ್ನು ಕಿತ್ತುಕೊಡುವ. ಕಣ್ಣಪ್ಪ ಇವರು.

ಸದಾ ಮಾನವ ಕಲ್ಯಾಣಕ್ಕಾಗಿ ದುಡಿಯುತ್ತಿರುವ ಡಾ॥ಮೋದಿಯವರು ಒಬ್ಬ ಪವಾಡ ಪುರುಷ. ನಮ್ಮ ಮಧ್ಯದಲ್ಲಿ ಜೀವಿಸುತ್ತಿರುವ ಮಹಾಸಂತ. ಕರ್ನಾಟಕದ ಧ್ರುವ ತಾರೆ.

# ಹೆಣ್ಣಾಗಿ ಹುಟ್ಟಿದುದೆನ್ನಯ ದೋಷಂ

ಕು॥ ಎಂ. ಎ. ನೀಲಾಂಬಿಕೆ, 242, ಉತ್ತರಾದಿ ಮಠದರಸ್ತೆ, ಮೈಸೂರು-4.

ಮಾತು ಮಾತಿಂಗೆ ನಿನ್ನ ಕೊಂದಿಹರೆಂದು
ಅಳುಕಂಡ್ಯಾ ... .......... ....
ನೀನತ್ತುದಕ್ಕೆ ತಕ್ಕದ ಮಾಡದೆ ಬಿಡನು

ಎಂದು 12 ನೇ ಶತಮಾನದಲ್ಲಿ ಮೂಕ ಪ್ರಾಣಿಗಳಿಗೆ ಧೈರ್ಯ ತುಂಬಿದಂತೆ ಇಂದು ಅದೇ ಸ್ಥಿತಿಯಲ್ಲಿರುವ ಹೆಣ್ಣಿನ ಬಾಳಿನಲ್ಲಿ ಧೈರ್ಯ ತುಂಬುವವರ ನಿರೀಕ್ಷೆಯಲ್ಲಿದ್ದಾಳೆ ಹೆಣ್ಣು. ಇದಕ್ಕೆ ಕಾರಣಇಲ್ಲದಿಲ್ಲ.

ಹೆಣ್ಣು ಇಂದು ಅಭಿಶಾಪದ ಮೂರ್ತಿಯಾಗಿದ್ದಾಳೆ. ಶತಮಾನಗಳಿಂದ ಕವಿಗಳ ಕಾವ್ಯಕನ್ನಿಕೆಯಾಗಿ ಬೆಳೆದುಬಂದಹೆಣ್ಣು, ಹೆಣ್ಣಾಗಿ ಹುಟ್ಟಿದುದೆನ್ನೆಯದೋಷಂ ಎಂದು ತನ್ನ ಹುಟ್ಟಿಗಾಗಿ ಇಂದು ಪರಿತಪಿಸಿ ತೊಳಲಿ ಬಳಲಿನಿಂತಿದ್ದಾಳೆ.

ಹೆಣ್ಣು ಬಾಳಿನಕಣ್ಣು ಎಂಬ ಭಾವನೆ ತೊಲಗಿ "ಹೆಣ್ಣು ಬಾಳಿಗೆ ಹುಣ್ಣು" ಎಂಬ ಅಪರಾಧದ ಸರಮಾಲೆಯನ್ನು ಧರಿಸಿದ್ದಾಳೆ....... ವೈಜ್ಞಾನಿಕ ಯುಗದಲ್ಲಿ ಅವಳಸ್ಥಿತಿಬದಲಾಗಿಲ್ಲ ಎಂಬುದು ಶೋಚನೀಯವೆ!

ಸಾಮಾನ್ಯವಾಗಿ ಮಗು ಹುಟ್ಟಿದಾಗ ಎಂಥ ಮಗು ? ಕೇಳಿ, ಹೆಣ್ಣು ಎಂದಾಕ್ಷಣ, ಅಯ್ಯೋ ಹೆಣ್ಣಾ; ಎಂಬ ಉದ್ಗಾರದದನಿ ವಿದ್ಯಾವಂತ ಜನರಿಂದಲೂ ಕೇಳಿ ಹೆಣ್ಣು ಪಡೆದ ತಾಯಿಗೆ ಆಕಾಶವೇ ತಲೆಮೇಲೆ ಕಳಚಿದಂತಾಗುತ್ತದೆ, ಮತ್ತು ಸಮಾಜವು ಅವರನ್ನು ನೋಡುವ ದೃಷ್ಟಿ, ಕನಿಕರದತ್ತತಿರುಗಿ ಆಗಬಾರದ್ದೇನೋ ಆಗಿದೆ ಎಂಬ ಚಿಂತೆ ತಲೆಯಾಕುತ್ತದೆ. ಆದೇ ಗಂಡುಮಗು ಎಂದಾಕ್ಷಣ ಮುಖಕಮಲ ಅರಳುತ್ತದೆ, ಸ್ವರ್ಗಕ್ಕೈಗೆಟುಕಿಸಿದಂತಾಗುತ್ತದೆ. ಪುಣ್ಯವಶಾತ್ ಹಾಗೇನಾದರು ಸ್ವರ್ಗದೊರೆತಿದ್ದರೆ ಅಲ್ಲಿಗೆ ಹೋದವರು ಪತ್ರಗಳ ಸರಮಾಲೆ ಬರೆದಿದ್ದರೆ ಇಂದು ಹೆಣ್ಣು ಸಂತಾನ ಕ್ಷಿಪ್ರದಲ್ಲಿ ನಶಿಸಿ ಹೋಗುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

ಪುರುಷ ಪ್ರಧಾನ ಸಮಾಜ ನಮ್ಮದಾದರೂ ತಾಯಿಗಿರುವ ಸ್ಥಾನ ಉನ್ನತವೆ. ಆತಾಯಿಯೂ ಒಂದು ಹೆಣ್ಣೆ. ಆದರೂ ಇಂದು ಹೆಣ್ಣಿನ ಸ್ಥಿತಿ ಇಂತಾಗಲು ಕಾರಣ ಯೋಚಿಸಿದಾಗ ಆಕೆ ತನ್ನ ಸಮಸ್ಯೆಯನ್ನು ಪರಿಹರಿಸಿಕೊಳ್ಳಲು 'ಅಶಕ್ತಳೆಂದೇ ಇರಬಹುದು. ಇಂದು ಪತ್ರಿಕೆಯ ಪುಟ ತೆರೆದಾಗ ಕಣ್ಮುಂದೆ ನಿಲ್ಲುತ್ತದೆ ಹೆಣ್ಣು. ಎದುರಿಸಬೇಕಾದ ಸಮಸ್ಯೆಗಳ ಪಟ್ಟಿ, ಸತಿಪದ್ಧತಿ, ದೇವದಾಸಿಪದ್ಧತಿ, ಪುರುಷರ-

ದೌರ್ಜನ್ಯ, ಅತ್ತೆಯ ಹಿಂಸೆ, ಇವುಗಳೆಲ್ಲದರ ಸುಳಿಗೆಸಿಲುಕಿ ಇದಕ್ಕೆ ಕೊನೆ ಎಂದು ಎಂಬ ನಿರೀಕ್ಷೆಯಲ್ಲಿದ್ದಾಳೆ. ಈ ಸ್ಥಿತಿಗೆ ಕಾರಣವನ್ನು ಸ್ಥೂಲವಾಗಿ ವೀಕ್ಷಿಸಿದಾಗ ಅರಿವಾಗುತ್ತದೆ.

ಇಂದು ಹೆಣ್ಣಿನ ನೆಮ್ಮದಿಯನ್ನು ಹೆಣ್ಣೇ ಕಲಕುತಿದ್ದಾಳೆ. ತನ್ನ ಮ... ತಾನು ಒಪ್ಪಿದವಳನ್ನು ಮದುವೆ ಆದನೆಂದೋ, ತಾನು ಇಚ್ಛಿಸಿದಷ್ಟು ವರದಕ್ಷಿ... ಸೊಸೆ ತರಲಿಲ್ಲವೆಂದೋ, ಹೆಣ್ಣು ಈ ದೌರ್ಜನ್ಯಕ್ಕೆ ಸಿಲುಕುತ್ತಾಳೆ. ಈ ಯುಗದಲ್ಲೂ ಸೀತೆಯಂತೆ ಅಗ್ನಿಪ್ರವೇಶನದಗ್ದನಾಗುತ್ತಾಳೆ. ಇನ್ನೊಂದೆಡೆ ಹೆಣ್ಣಿನ ಮಾ... ಬಲೆಗೆ ಸಿಕ್ಕಿ ಮೋಸ ಹೋಗಿ ಜನರ ದಾಸಿಯಾಗಿ ಒಲ್ಲದ ಜೀವನ ನಡೆಸುವ ಹೆಣ್ಣು ಮಕ್ಕಳು ತಾನು ಸೊಸೆಯಾಗಿದ್ದಾಗ ಅನುಭವಿಸಿದ್ದಕ್ಕಿಂತ ತನ್ನ ಸೊಸೆ ಅನುಭವಿಸು... ಹಿಂಸೆ ಕಡಿಮೆ ಎಂಬ ಮನೋಭಾವ ಅತ್ತೆಯಲ್ಲಿ ಮೈದಾಳಿದಾಗ ಹಿಂಸೆಯ ರೂಪಕ್ಕೆ ಹೆಣ್ಣು ಬಲಿಆಗಬೇಕಾಗುತ್ತದೆ. ಪ್ರೀತಿ ವಿಶ್ವಾಸ ಕ್ಷಯಿಸಿ ಹೆಣ್ಣಲ್ಲಿ ಬದುಕುವ ಆ... ಕಮರತ್ತದೆ. ಇದು ದಿನನಿತ್ಯ ಪರಿಸರದಲ್ಲಿ ಕಾಣುವ ಸಮಸ್ಯೆ.

ಮದ್ಯದ ಚಟಕ್ಕೆ ಬಲಿಯಾದ ಪತಿ ತಾನು ಕಟ್ಟಿದ ತಾಳಿಯನ್ನು ಕದ್ದೊಯ್ದರೂ ತಾಳಿಕೊಳ್ಳುತ್ತಾಳೆ ಹೆಣ್ಣು. ತಾನು ದುಡಿದ ಫಲವನ್ನು ಪತಿ... ಕೊಟ್ಟು ತನ್ನ ಮನೆಯ ಗೌರವ ಉಳಿಸಲು ಯತ್ನಿಸುತ್ತಾಳೆ. ವಿದ್ಯಾವಂತಳಾ... ಕಾರಣ ಸಹನಾಶೀಲಳು ಆಗಿರಬೇಕೆಂಬ ಭಾವನೆ ತಾಳುತ್ತಾಳೆ. ಕೊನೆಗೆ ದೌರ್ಜ... ಸಹಿಸದೆ ಮಕ್ಕಳೊಡನೆ ಪರಲೋಕ ಯಾತ್ರೆ ಕೈಗೊಳ್ಳುತ್ತಾಳೆ. ಅದಕ್ಕೆ ಪತಿಯ ಸಹಕಾರವಿದ್ದೇ ಇರುತ್ತದೆ. ವಿವಾಹಿತ ಮಹಿಳೆಯರ ಒಂದು ಸಮಸ್ಯೆ, ಅವಿವಾಹಿ... ರದ್ದು ಅವರದೇ ಆದ ಸಮಸ್ಯೆ ಇರುತ್ತದೆ. ಹೆಣ್ಣುಮಗು ತಾನೆ, ಓದಿಸಿ, ಕೆಲಸ... ಸೇರಿಸಿದರಾಯಿತು ಎಂದು ನೆಮ್ಮದಿಯಿಂದ ಕೂರುವಂತಿಲ್ಲ. ಅನ್ಯರಿಗೆ ಹೊರೆಯಾ... ಲಿಚ್ಛಿಸದ ಹೆಣ್ಣು ಕೆಲಸಕ್ಕೆ ಸೇರಿದಾಗ ಅಲ್ಲಿ ಹದ್ದಿನಂತ ಜನರ ಕಣ್ಣಿಗೆ ಬಲಿಯಾ... ತ್ತಾಳೆ. ಅದಕ್ಕೆ ಬಲಿಯಾಗದಿದ್ದರೆ ಅಪವಾದಗಳ ಪಟ್ಟಧರಿಸಲು ಸಿದ್ಧಳಿರಬೇಕು ನಾ ನಿರಪರಾದಿ ಎಂದು ಹೇಳಲಾಗದ ಸ್ಥಿತಿಗೆ ಸಿಲುಕುತ್ತಾಳೆ. ಅವಳ ಆದರ್ಶ ಮಣ್ಣ... ಪಾಲಾಗುತ್ತದೆ. ದೇವರಿಗೂ ಅವಳ ಆರ್ತನಾದ ಮುಟ್ಟುವುದಿಲ್ಲ. ಆತನು ಒ... ಪುರುಷನಾಗಿ ನಿಲ್ಲುತ್ತಾನೆ. ಅಲ್ಲಿಹೊಂದಿಕೊಳ್ಳಲು ಕಷ್ಟವಾಗುತ್ತದೆ. ಯಾರಿ... ಮೊರೆ ಹೋಗುವುದು ಮೇಲಧಿಕಾರಿಗಳಿಗೆ ಅವರಿಗೂ ಇವಳ ಆದರ್ಶ ಅಸಹನೀ... ವಾಗಿರುತ್ತದೆ. ದಿನ ನಿತ್ಯ ಇಂಥ ವಾತಾವರಣ ನೋಡಿ ಅವಳಲ್ಲಿ ಬದಲಾವಣೆ ಆಗುತ್ತ... ಆದರ್ಶಗಳ ಮಣ್ಣು ಪಾಲು ಮಾಡುತ್ತಾಳೆ. ತನಗೇನು? ಹಣ ಬಂದರಾಯಿ... ಎಂಬತ್ತ ಮನ ನಿಲ್ಲುತ್ತದೆ. ಮೌನಿಯಾಗುತ್ತಾಳೆ. ತನ್ನಲ್ಲಿದ್ದ ಪ್ರತಿಭೆ ಕುಂಠಿತವಾ... ದರೂ ಚಿಂತಿಸಳು. ಕೆಲಸಮಾಡದೆ ಜನಮೆಚ್ಚುವತ್ತ ಚಿಂತಿಸುತ್ತಾಳೆ. ಇದು ಬೇರೆದ... ಳಿಗಿಂತ ಶೈಕ್ಷಣಿಕ ಕ್ಷೇತ್ರಗಳಲ್ಲಾದರೆ ಎಷ್ಟ ತೊಂದರೆ ಆಗುವುದು. ಕಲಿಸುವೆಡೆ ಶ್ರದ...

ಸಿದ್ಧಗಂ...

ತಪ್ಪಿದರೆ ಭಾವೀಪ್ರಜೆಗಳನ್ನು ಹೇಗೆ ರೂಪಿಸಿಯಾರು. ಸ್ವಾರ್ಥಿಪರ ಸಮಾಜದಲ್ಲಿ ಸ್ವಾರ್ಥ ಸಾಧಕರು, ಘಾತುಕರ ಸೃಷ್ಟಿ ಆದೀತು. ಕಲುಷಿತವಾತಾವರಣ ಹೆಚ್ಚೀತು. ನನ್ನ ಸ್ನೇಹಿತೆ ಒಬ್ಬರು ಅಧಿಕಾರಿಣಿ ಆಕೆ ಹೇಳುತ್ತಾಳೆ. " ಇಂದು ಆದರ್ಶ ಎಂದು ಏಕೆ ಒದ್ದಾಡ ಬೇಕು. ತಿಂಗಳಿಗೊಮ್ಮೆ ಬರುವ ಹಣ ಬಂದರೆ ಸಾಕು, ಉಳಿದಿದ್ದು ಮೌನವಾಗಿದ್ದರೆ ಲೇಸು, ಇಲ್ಲದಿದ್ದರೆ ಸಮಸ್ಯೆಗಳ ಹಗ್ಗಕ್ಕೆ ನೇಣು ಹಾಕಿಕೊಳ್ಳಬೇಕಾಗುತ್ತದೆ. ಆದ್ದರಿಂದ ಬರುವ ಹಣಕ್ಕೆ ತಕ್ಕ ಕೆಲಸ ಮಾಡಬೇಕೆಂದರೆ ಸಮಸ್ಯೆ ಎದುರಿಸಬೇಕು. ಆಕೆಯ ಮಾತು ನಿಜವೆನಿಸಿದರೂ ನಾವು ಹಾಗೆ ಯೋಚಿಸುವುದು ತಪ್ಪು ಎನಿಸ ದಿರದು. ಸ್ತ್ರೀ ತಮ್ಮದೇನನ್ನೊ ಕಸಿದುಕೊಂಡಿದ್ದಾರೆಂಬ ಭಾವನೆ ಪುರುಷರಲ್ಲಿ ಬಂದಾಗ ಇಂಥ ವಾತಾವರಣ ಉಂಟಾಗುತ್ತದೆ, ಇಂತಹ ಬಳಿ ಹೆಣ್ಣು ಹೂವಾಗಿ ಅರಳಿ ತನ್ನ ಪ್ರತಿಭೆಯಕಂಪನ್ನು ಹರಡಬೇಕಾದಲ್ಲಿ ಬಾಡಿ ನಶಿಸುತ್ತಿದ್ದಾಳೆ. ನಿರಪರಾಧಿ ಆದರೂ ದನಿ ಎತ್ತಿ ಹೇಳಲಾರದೆ ಜೀವಚ್ಛವವಾಗಿದ್ದಾಳೆ.

ಇಂದು ಅಂತರರಾಷ್ಟ್ರೀಯ ಹೆಣ್ಣುಮಕ್ಕಳ ವರ್ಷ ವಿಶ್ವದಾದ್ಯಂತ ಆಚರಣೆ ವೈಭವವಾಗಿ ನಡೆದಿದೆ. ಸ್ತ್ರೀಯರ ಕಲ್ಯಾಣಕ್ಕೆ ಅನೇಕ ಸೌಲಭ್ಯಗಳನ್ನು ಒದಗಿಸಿದ್ದಾರೆ. ಪತ್ರಿಕೆಗಳು ಪುಟ ಪುಟದಲ್ಲಿ ಹೆಣ್ಣಿನ ಬಗ್ಗೆ ಹೇಳಿಕೆಗಳು, ಘೋಷಣೆಗಳು, ಭಾಷಣಗಳು, ಪುಟಿದಿದೆ. ಈ ಅಬ್ಬರದ ಅಲೆ ಈ ವರ್ಷ ಕಳೆದ ಮೇಲೆ ಹಿಂದಿನಂತಾಗುವುದೇ ? ತೂಗುಯ್ಯಾಲೆಯಲ್ಲಿದ್ದಾಳೆ ಹೆಣ್ಣು.

ಈ ಎಲ್ಲ ಸಮಸ್ಯೆಗಳನ್ನು ಎದುರಿಸಲಾಗದೆ ಹೇಳುತ್ತಾಳೆ, ಮಕ್ಕಳಿಲ್ಲದಿದ್ದರೂ ಬೇಡ ಹೆಣ್ಣು ಸಂತಾನ ಎಂದು ತಾನು ಪಡುವ ಈ ಕಷ್ಟಕ್ಕೆಲ್ಲ ಕಾರಣ ಯಾರ ತಪ್ಪು ಅಲ್ಲ " ಹೆಣ್ಣಾಗಿ ಹುಟ್ಟಿದುದೆನ್ನೆಯ ದೋಷಂ " ಎಂದು

---

**ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.**

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಸಂಚಿಕೆಗಳು ಕೆಲವು ಸದಸ್ಯರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮ ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಲಯಕ್ಕೆ ಕಳುಹಿಸಿ ಕೊಡುವುದರ ಮುಖೇನ "ಸಿದ್ಧಗಂಗಾ" ನಿಮಗೆ ಕ್ರಮವಾಗಿ ತಲುಪಲು ಸಹಕರಿಸಬೇಕಾಗಿ ಪ್ರಾರ್ಥನೆ. ತಮ್ಮ ಸದಸ್ಯತ್ವದ ನಂಬರನ್ನು ತಪ್ಪದೇ ತಿಳಿಸಿರಿ.

ಪ್ರಕಾಶಕರು.

---

# ಬಂಧು ಬಿದಿಗೆ

ಶ್ರೀಮತಿ ಮಂದಾಕಿನೀದೇವಿ, ಜೀವನ ಜ್ಯೋತಿ, ಧಾರವಾಡ.

ದೀವಳಿಗೀ ಹಬ್ಬಕ್ಕ ದಿವ್ಯ ಪ್ರೇಮ ಹೊತ್ತ ದೀನಳ ಮನಿಗೆ
ಬಂದಾನೇನs ತಂಗಿ ಚಂದಿರಣ್ಣ ?

ನರಕ ತಾ ಮಡಿದಾಗ ಮುಸುಕು ಮಬ್ಬಿಸಾಗ ನಸುಕಿನ ನಲಿವು
ತಂದಾನೇನs ತಂಗಿ ಚಂದಿರಣ್ಣ ?

ಭವದ ಬಂಧಕೆ ತನ್ನ ಬಾಂಧವರನ್ನೇ ಮರೆತ ತಂಗಿಯ ಕೊರಗು
ಕಂಡಾನೇನs ತಂಗಿ ಚಂದಿರಣ್ಣ ?

ಬಿದಿಗೀಯಿಂ ಬಿದಿಗೀಗೆ ಬೆಳೆವ ಬಂಧು ಎನ್ನ ಅಳಲನ ಕಂಡು
ಬಂದಾನೇನs ತಂಗಿ ಚಂದಿರಣ್ಣ?

ಹೃದಯದ ಹರಿವಾಣದೊಳಗೆ ಕಂಗಳ–ಜ್ಯೋತಿ ಪ್ರೇಮದಾರತಿ
ಕೊಂಡಾನೇನs ತಂಗಿ ಚಂದಿರಣ್ಣ ?

ಬಂದು ವರುವರುಷಕ್ಕ ಚೆಂದ ಸತ್ಸಂಗಕ್ಕ ಹರುಷವ ತುಂಬಿ
ಹೋದಾನೇನs ತಂಗಿ ಚಂದಿರಣ್ಣ ?

ಲೋಕದ ಸೆಳೆತಕ್ಕ ಸಾಕಾದ ಜೀವಕ್ಕ ಮುಕ್ತ ಬಂಧುತ್ವ
ನೀಡ್ಯಾನೇನs ತಂಗಿ ಚಂದಿರಣ್ಣ ?

"ಜನ–ಮನ ಬೆಳಗುವ ಬಂಧು ಬಾ ಬಾ ॥ ಎಂದು ಕರೆದರ ಭರದಿ
ಬಂದಾನೇನs ತಂಗಿ ಚಂದಿರಣ್ಣ ?

# ಅನುಭವದ ಮಾತುಗಳು

ಡಾ॥ ಬಸವರಾಜಶಾಸ್ತ್ರಿಗಳು, ತಾಳೂರುಬೃಹನ್ಮಠ, ಬಳ್ಳಾರಿ.

## ೧. ನಿನ್ನಷ್ಟಕ್ಕೆ ನೀನು ಸುಧಾರಿಸಿಕೊ, ಸಮಾಜವು ತನ್ನಷ್ಟಕ್ಕೆ ತಾನು ಸುಧಾರಿಸಿಕೊಳ್ಳುವುದು,

## (Reform your self, the society will reform itself)

"ಶಾಸ್ತ್ರಾತ್ ರುಢೀಗರೀಯಸೀ" ಶಾಸ್ತ್ರಕ್ಕಿಂತ ರೂಢಿಶ್ರೇಷ್ಠ, ಗಾದೆ ಮಾತು ವೇದಕ್ಕೆ ಸಮಾನ. ಎಂಬ ಹೇಳಿಕೆಯಲ್ಲಿ ಅರ್ಥವಿದೆ. ಅದನ್ನು ನಾವುನೋಡುವ. ಮೇಲಿನ ಮಾತನ್ನು ವಿವ ಕ್ಷಿನೋಡಿದಾಗ. ನೀನೇ ಸಮಾಜವು, ಸಮಾಜವೇ ನೀನು, ನಿನ್ನ ಸುಧಾರಣೆಯೇ ಸಮಾಜದಸುಧಾರಣೆಯು. ಪರರ ಡೊಂಕು ನೀನೇಕೆ ಆಡಿಕೊಳ್ಳುವಿ. ನಿನ್ನ ಮನವ ನೀನು ಶಾಂತವಾಗಿರಿಸಿಕೊ, ಮನಸ್ಸಿನಲ್ಲಿ ಸದ್ಭಾವನೆ ತುಂಬಿರಲಿ. ನಿನ್ನ ದೇಹವು ಉತ್ತಮ ಆರೋಗ್ಯಧಾಮವಾಗಲಿ, ಹಗಲಿರುಳು ಒಳ್ಳೆಯ ಕಾರ್ಯಕ್ಕೆ ದುಡಿಯುತ್ತಿರಲಿ. ಮತ್ತೊಬ್ಬರ ದೋಷಗಳನ್ನು ಆಡಿಕೊಳ್ಳುವುದು, ಅವನಿಗೆ ದ್ರೋಹ ಚಿಂತನೆ ಮಾಡುವುದು ನಿನ್ನ ದುಖಃಕ್ಕೆ ಕಾರಣ. ಇದು ದೇವರು ಮೆಚ್ಚುವ ದಾರಿಯಲ್ಲ. ತನ್ನನ್ನು ತಾನು ತಿಳಿದುಕೊಂಡು ನಡೆದರೆ ದೇವರಕೃಪೆ ಖಂಡಿತ, ನಿನ್ನನ್ನು ನೀನು ಮೊದಲು ತಿಳಿ. (Know thy self first) ತಿಳಿದು ತನ್ನೊಳು ತನ್ನ ಮೋಕ್ಷವ-ಗಳಿಸಿಕೊಂಡರೆ ಸಾಲದೆ ? ಎಂಬುವನು ಮಹಲಿಂಗರಂಗ. ತನ್ನ ತಾನು ತಿಳಿದವನು ಎಲ್ಲವನ್ನೂ ತಿಳಿಯಬಲ್ಲ. ತನ್ನ ತಾನು ತಿಳಿಯದವನು ಏನನ್ನೂ ಯಾರನ್ನೂ ತಿಳಿಯ ಲಾರನು. ಭಾರತದೇಶದ ಇಂದಿನ ಕಷ್ಟಕ್ಕೆ ಕಾರಣವಾದುದು ಈ ಕೊರತೆಯೇ. ದವಸ –ಧಾನ್ಯ ಬೆಳೆದ ಸಾಹುಕಾರ ಹಳೆಯ ಹಗೇವಿನಲ್ಲಿ ಹಾಕಿಕುಳಿತಿರುವನು. ವಿದ್ಯಾವಂತ ರಾದ ಅಧಿಕಾರಿಗಳು ಲಂಚಕ್ಕೆ ಹೊಂಚು ಹಾಕಿಕುಳಿತಿರುವರು. ಹಣವಂತರೆಲ್ಲ ಗುಣವಂತರಾದ ಬಡವರನ್ನು ಹೆಣಕ್ಕಿಂತ ಕಡೆಯಾಗಿ ಕಾಣುತ್ತಿರುವರು. ಬಡವ-ರಾದರೂ ನಯ, ವಿನಯ, ಭಯ, ಭೀತಿಯಿಲ್ಲದೆ ನಡೆಯುತ್ತಿರುವರು. ಸರ್ವರಿಗೆ ಸಮಸಾದಸ್ವಾತಂತ್ರ್ಯದ ಪಾಲು ಇಲ್ಲದಿರುವುದೇ ಈ ದುಖಃಕ್ಕೆ ಕಾರಣ. ತನ್ನಂತೆ ಪರರ ಬಗೆದೊಡೆ ಕೈಲಾಸಬಿನ್ನಾಣವಕ್ಕು॥ "ಆತ್ಮವತ್ ಸರ್ವಭೂತಾನಿ" ॥ ಸರ್ವೇಜನಾಃ ಸುಖಿನೋಭವಂತು, ಎಂಬ ಭಾವನೆ ಭಾರತೀಯರೆಲ್ಲರಲ್ಲಿ ಮೂಡಿಬರಬೇಕು, ಬುದ್ಧಿಗಳಲ್ಲಿ ಬೃಹಸ್ಪತಿಗಳಾದವರು ಬಲದಲ್ಲಿ ಭೀಮಸೇನರಾಗಿ ದೇಶದ ಉದ್ಧಾರಕ್ಕೆ ಬದ್ಧಕಂಕಣರಾಗ ಬೇಕು. ಈಗ ಜನರಿಗಿರುವ ದುಖಃಗಳೆಲ್ಲ ದೂರವಾಗಬೇಕು, ಪ್ರತಿಯೊಬ್ಬರಿಗೂಗೌರವ ಕೊಟ್ಟು ಗೌರವಪಡೆಯಬೇಕು. ಮತದಲ್ಲಿ, ಧರ್ಮದಲ್ಲಿ, ಭಾಷೆಯಲ್ಲಿ, ದೇವರಲ್ಲಿ, ಸಮನ್ವಯಸಾಧಿಸಬೇಕು. ಭಾರತವು ಅನೇಕತೆಯಲ್ಲಿಯೇ ಏಕತೆಯನ್ನುಸಾಧಿಸಬೇಕು. ಎಲ್ಲರೂ ಸುಖದಿಂದ ಬಾಳಿ ಸರ್ವತೋಮುಖವಾಗಿ ಬೆಳೆಯಬೇಕು. ಮುಂದಿನಸಂತತಿ ನಮ್ಮನ್ನು ನೋಡಿನಲಿಯಬೇಕು, ಈ ಸಂದೇಶವನ್ನೇ ಸಿದ್ಧಗಂಗಾಶತತವಾಗಿ ಸಾರುತ್ತಿದೆ.

## ೨. ನಿನ್ನ ಒಳ್ಳೆತನದಿಂದ ನಿನ್ನ ಜೀವನ ಕಾಪಾಡಿಕೊಳ್ಳಬಲ್ಲೆ.

(Build your character you can shape youre life)

ಹಣಕ್ಕಿಂತ ಗುಣವೇ ಪ್ರಧಾನ. ಹಣದಿಂದಾಗದಕೆಲಸ ಗುಣದಿಂದಾಗುತ್ತದೆ. "ಗುಣಹಾನಿಯಿಂದಧೋಗತಿ, ಗುಣದಿಂ ಸ್ವರ್ಗಾಪವರ್ಗ ಸುಖಮಕ್ಕು ಮೆನಲ್, ಗುಣಹೀನನ ಸಿರಿಯಿಂದಂ ಗುಣಿಗಳ ಬಡತನವೇ ಲೇಸು" ಗುಣವೇರೂಪ, ರೂಪವೇ ಗುಣ, ಗುಣವೇಜೀವನವನ್ನು ಕಟ್ಟುತ್ತದೆ. ಗುಣವಿಲ್ಲದಬಾಳು ಹಾಳಾಗುತ್ತದೆ. ಜಗತ್ತಿನಲ್ಲಿ ಗುಣವೇ ಪೂಜ್ಯತೆಯನ್ನು ಪಡೆದಿರವುದು. ಗುಣಕ್ಕೆ ವಯಸ್ಸು. ಲಿಂಗಭೇದ ಅಡ್ಡಿ ಬರುವುದಿಲ್ಲ, "ಗುಣಾಃ ಪೂಜ್ಯಾಸ್ಥಾನಂ ಗುಣಿಷುನಚಲಿಂಗನಚವಯ", ಇಲ್ಲಿ ಸಲ್ಲುವವರರು ಅಲ್ಲಿಯೂ ಸಲ್ಲುವರು, ಗುಣಕ್ಕೇನೆ ದೇವರ ಒಲಿಮೆ. ಶೀಲಸಂಪಾದನೆಯಿಂದಲೇ ಶೂನ್ಯಸಂಪಾದನೆ. ಅಂತರಂಗ ಬಹಿರಂಗ ಶುದ್ಧಿಗಳು ಗುಣದಿಂದಲೇ, ಗುಣವಂತನ ವಿದ್ಯೆಯೇ ಸಾರ್ಥಕ, ವಿನಯುಂಗೂಡಿದ ವಿದ್ಯೆ ಶೋಭಿಪುದಲಾ, ಗುಣವಿಲ್ಲದ ವಿದ್ಯೆ ನಿರರ್ಥಕ. ಗುಣವುಳ್ಳ ವಿದ್ಯೆ ಬಂಗಾರಕ್ಕೆ ಸುವಾಸನೆ ಬಂದಂತೆ, ಕಬ್ಬಿಗಿಟ್ಟಜೇನು, ಬಂಗಾರದ ಕುಂದಣದಲ್ಲಿ ಕೆತ್ತಿದ ರತ್ನ, ನಾರಿಗೆ ಕೂಡ ಗುಣವೇ ಶೃಂಗಾರ, ಗುಣವೇ ಭೂಷಣವಾಗಲಿ ಮಣಿಹೇವಸಾದಿಗಳಲ್ಲ, ಗುಣವಿಲ್ಲದವನಿಗೆ ಗೌರವವೇ ಇಲ್ಲ, ಗುಣವಂತನಿಗೆ ಕಷ್ಟ ಬಂದರೆ ಪ್ರಪಂಚಕ್ಕೇನೇ ಬಂದಷ್ಟು ನೋವಾಗುತ್ತದೆ, ಸಜ್ಜನನು ಸತ್ತರೆ ಊರ್ಜನರು ಮರುಗುವರು, ದುರ್ಜನನು ಸತ್ತರೆ ವ್ಯಯ ಕಜ್ಜ ಹೊಯ್ತೆಂಬರು ಸರ್ವಜ್ಞ" ವಂಶದಲ್ಲಿ ಒಬ್ಬ ಗುಣವಂತನಿದ್ದರೆ ತೋಟದಲ್ಲಿ ಒಂದು ಗಂದಧ ಮರದಿಂದ ತೋಟವೆಲ್ಲ ಸುವಾಸನೆ ಬರುವಂತೆ, ಗುಣವಂತನೊಬ್ಬನಿಂದ ಇಡೀವಂಶಕ್ಕೆ ಕೀರ್ತಿಬರುವುದು. ಆದ್ದರಿಂದ ಗುಣವೇ ಜೀವನ, ಜೀವನವೇ ಗುಣವು, ಜೀವನದ ರಕ್ಷಣೆ ಗುಣದಿಂದಲೇ, ಮಹಾಮಹಿಮರೆಲ್ಲ ಗುಣದಿಂದಲೇ ದೊಡ್ಡವರಾಗಿರುವರು, ಗುಣವಿಲ್ಲದವನು ಎಷ್ಟು ದೊಡ್ಡವನಾದರೇನು? ಕಡೆಗೆ ಅವನ ಹೆಸರೇ ಉಳಿಯುವುದಿಲ್ಲ. ಆದ ಕಾರಣ ಹಣದಸಂಪಾದನೆಗೆ ಮಹತ್ವ ಕೊಡದೆ, ಗುಣವನ್ನೇ ಮೊದಲು ಸಂಪಾದಿಸಬೇಕು "ಪಾತ್ರ ತ್ವಾತ್ ಧನಮಾಪ್ನೋತಿ ಗುಣಕ್ಕೆ ನೀತಿ, ಶೀಲ ಎಂಬ ಹೆಸರುಗಳುಂಟು. ಗುಣವಿಲ್ಲದ ಮನುಷ್ಯ ಒಡೆದಗಡಿಗೆ, ಗಡಿಗೆಒಡೆದ ಮೇಲೆ ಕೆಲಸಕ್ಕೆ ಬರುವುದಿಲ್ಲ, ಇದಕ್ಕಾಗಿಯೇ ಸತ್ತಾಗ ಗಡಿಗೆ ಒಡೆಯುವರು, ಕಡೆಗೀಲಿಲ್ಲದ ಬಂಡಿಯಂತೆ ಗುಣವಂತನಲ್ಲದವನ ಜೀವನ, ಗುಣದಿಂದಲೇ ಪ್ರಾಣ ಉಳಿದ ಉದಾಹರಣೆಗಳು ಬೇಕಾದಷ್ಟಿವೆ, ಕೀರ್ತಿ ಉಳಿಯು-ವುದೂ, ಜೀವನ ಉಳಿಯುವುದೂ ಗುಣದಿಂದಲೇ ಅಂದ ಬಳಿಕ ಗುಣದಮಹಿಮೆ ಎಷ್ಟು ವರ್ಣಿಸಿದರೂ, ಸಾಲದು, ಗುಣ ಶಾಶ್ವತ ಸಿದ್ಧಗಂಗಾ ಹೆಸರು ಶಾಶ್ವತ.

# ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು

ಎಂ. ಬಿ. ಸದಾಶಿವಯ್ಯ, ಆಂಗ್ಲ ಭಾಷಾ ಉಪನ್ಯಾಸಕರು, ಸಿದ್ಧಗಂಗಾ ಕಾಲೇಜು, ತುಮಕೂರು.

ತುಂಬು ಪರಿಪೂರ್ಣ ಜೀವನಸಾಗಿಸುತ್ತಾ ಸಾಹಿತ್ಯದಲ್ಲಿ ಹೇರಳ ಕೃಷಿಮಾಡಿ ಸಾರ್ಥಕತೆಯನ್ನು ಹೊಂದಿ ಕನ್ನಡ ಕುಲಕೋಟಿಗೆ, ಅದರಲ್ಲೂ ವೀರಶೈವ ಜನಾಂಗಕ್ಕೆ ಮಂಗಳ ಕಳಶಪ್ರಾಯವಾಗಿದ್ದ ಆಸ್ಥಾನ ವಿದ್ವಾನ್ ಶ್ರೀ ಎಂ.ಜಿ. ನಂಜುಂಡಾರಾಧ್ಯರು 7-11-90ರಂದು ಶಿವೈಕ್ಯರಾದುದು ನಾಡಿಗೆ ತುಂಬಲಾರದ ನಷ್ಟವಾಗಿದೆ.

ಮಿತ ಮೃದು ಭಾಷಿ. ಅವರ ಶಾಂತನಿರ್ಮಲ ಸ್ವಭಾವಕ್ಕೆ ಕೋಪ ಮೈಲಿದೂರ. ದೃಢಕಾಯ, ಗುಂಡು ಮುಖ, ವಿದ್ವತ್ತನ್ನು ಎತ್ತಿತೋರಿಸುವ ವಿಶಾಲವಾದಹಣೆ, ಸದಾ ಬಿಳಿಯ ಮಲ್ಲುಪಂಚೆ, ಜುಬ್ಬಾಧರಿಸಿ ಮೇಲೆ ಶಾಲುಹೊದ್ದು ಎದ್ದು ಕಾಣುವ ವ್ಯಕ್ತಿತ್ವ. ಅವರನ್ನು ನೋಡಿದ ಪ್ರತಿಯೊಬ್ಬರಿಗೂ ಕೈ ಜೋಡಿಸಬೇಕೆಂಬ ಪ್ರಚೋದನೆ. ಅವರನ್ನು ಸಮೀಪದಲ್ಲಿ ಕಂಡವರಿಗೆ ಅವರೊಬ್ಬ ಸದಾಚಾರದ ಸಾಗರ ಮತ್ತು ಪಾಂಡಿತ್ಯದ ಆಗರ. ನುಡಿನಡೆಗಳ ಸಮ್ಮಿಳನ, ಆದರ್ಶ ವ್ಯಕ್ತಿತ್ವ, ಸಂಸ್ಕೃತ ಅಧ್ಯಾಪಕರಾಗಿ ಅಪಾರಸೇವೆ ಮತ್ತು ವೃತ್ತಿಯಲ್ಲಿ ಇತರರಿಗೆ ಮೇಲ್ಪಂಕ್ತಿಯ ಮಾರ್ಗದರ್ಶನ. ಅವರು ಬಿಟ್ಟುಹೋಗಿರುವ 90ಕ್ಕೂ ಹೆಚ್ಚು ಪುಸ್ತಕಗಳು ಸಾಹಿತ್ಯ ಕಣಜದಲ್ಲಿ ಎಷ್ಟು ವರುಷಗಳು ಬೇಕಾದರೂ ಪರಿಶೋಧನೆಗೆ ಇಡಬಹುದಾದ ಗಟ್ಟಿ ಧಾನ್ಯ.

ತಪೋ ನಿಷ್ಠ ಮಹಾನ್ ಮಠಾಧಿಪತಿಗಳಿಂದ ಮನ್ನಣೆ. ಅವರ ವಿದ್ವತ್ತನ್ನು ಗುರುತಿಸಿ ಅವರಿಗೆ ದಯಪಾಲಿಸಿದ ಬಿರುದುಗಳು "ಶಿವಾದ್ವೈತ ಭೂಷಣ" (ರಂಭಾಪುರಿ ಜಗದ್ಗುರುಗಳು) "ಸಾಹಿತ್ಯ ರತ್ನ" (ಸುತ್ತೂರು ಜಗದ್ಗುರುಗಳು) "ಶಿವತತ್ವ ಚಿಂತಾರತ್ನ" (ಚಿತ್ರದುರ್ಗದ ಜಗದ್ಗುರುಗಳು) "ವಿದ್ಯಾವಾರಿಧಿ" (ಮೂರುಸಾವಿರ ಮಠದಶ್ರೀಗಳು) 1946ರಲ್ಲಿ 32ರಹರೆಯ ಪ್ರಾಯದಲ್ಲೇ ಮೈಸೂರು ಮಹಾರಾಜರಿಂದ "ಆಸ್ಥಾನವಿದ್ವಾನ್" ಆಗಿ ವಿಶೇಷ ಮಾನ್ಯತೆ.

ಕನ್ನಡ, ಹಿಂದಿ, ಮತ್ತು ತೆಲುಗು ಭಾಷೆಗಳಲ್ಲಿ ಅಪಾರ ಪಾಂಡಿತ್ಯ, ಸಂಸ್ಕೃತ ಭಾಷೆಯಲ್ಲಿ ಅವರೊಂದು ದಿಗ್ಗಜ. ಶಕ್ತಿವಿಶಿಷ್ಟಾದ್ವೈತ ಸಂಪಾದಿಸಿದ ಮಹಾನ್‌ಶಕ್ತಿ. ಅವರ ಜೀವನ ಸದಾಅಧ್ಯಯನ, ಅಧ್ಯಾಪನ ಮತ್ತು ಲೇಖನ. ಸ್ವಯಂ ಕೃಷಿ ಸಾಧನೆಯ ಫಲ, ರಾಜ್ಯ ಮತ್ತು ರಾಷ್ಟ್ರಪ್ರಶಸ್ತಿಗಳಮಾಲೆ ಅವರಿಗೆ, ಪಂಡಿತರಲ್ಲಿ ಪಂಡಿತರಾಗಿಯೂ ನಿರಹಂಕಾರದ ಸೌಜನ್ಯಮೂರ್ತಿ. ಅವರ ಪಾಂಡಿತ್ಯದ ಕುಂಚ ಸಾಹಿತ್ಯದ ಸರ್ವಬಣ್ಣಗಳನ್ನು ಬಿಡಿಸಿವೆ. ಗದ್ಯ, ಪದ್ಯ, ನಾಟಕ, ವಿಮರ್ಶೆ, ಪ್ರಬಂಧ, ಭಾಷಾಂತರ, ಕಥಾ-ಸಾಹಿತ್ಯ, ಜೀವನಚರಿತ್ರೆ, ಕಾದಂಬರಿ ಮುಂತಾದ ವಲಯಗಳಲ್ಲಿ ಕೃಷಿಮಾಡಿ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯಕ್ಕೆ ಅಪಾರ ಕೊಡುಗೆ ನೀಡಿದ ಸವ್ಯಸಾಚಿ.

ಉಜ್ಜಯನಿ, ದೆಹಲಿ, ನಾಗಪುರ, ಕಾಶ್ಮೀರ ಮುಂತಾದ ಸ್ಥಳಗಳಲ್ಲಿ ವಿಸ್ತೃತ ಸಾಹಿತ್ಯ ಸಮ್ಮೇಳನ ಮತ್ತು ವಿದ್ವದ್ ಗೋಷ್ಠಿಗಳಲ್ಲಿ ಭಾಗವಹಿಸಿ ಕನ್ನಡನಾಡಿಗೆ ಕೀರ್ತಿ ತಂದ ಚೇತನ. ಆಕಾಶವಾಣಿಯಲ್ಲಿ ಇವರು ಕೊಟ್ಟ ಸುಭಾಷಿತ ಮತ್ತು ಚಿನ್ನುಡಿಗಳು ಹಲವಾರು. 1946ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ ಕನ್ನಡನುಡಿಯ, ಸಂಪಾದಕರಾಗಿ ಸೇವೆ. ಹರಳೂರಿನ ಶ್ರೀವೀರಭದ್ರಸ್ವಾಮಿ ಸುಪ್ರಭಾತ ರಚನೆ. ಶಕ್ತಿವಿಶಿಷ್ಟಾದ್ವೈತ ವೇದಾಂತ, ವೀರಶೈವಾಗಮ ಮತ್ತು ಅಲಂಕಾರ ಶಾಸ್ತ್ರ ಇವರ ಪ್ರಾವೀಣ್ಯತೆಯ ಕ್ಷೇತ್ರ. ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿನ ಪ್ರಾಧ್ಯಾಪಕರಾಗಿ ನಿವೃತ್ತಿ.

ಕೋಲಾರ ಜಿಲ್ಲೆ ಗೌರೀಬಿದನೂರು ತಾ|| ಗುಂಡ್ಲಹಳ್ಳಿಯಲ್ಲಿ ಬಡಜಂಗಮ ಆರಾಧ್ಯರ ಕುಟುಂಬದಲ್ಲಿ 1-8-1914ರಲ್ಲಿ ಜನನ, ಬಾಲ್ಯದಲ್ಲೇ ಕಡುಬಡತನದ ಅರಿವು. ವಿದ್ಯಾವಂತನಾಗಬೇಕೆಂಬ ಹೆಬ್ಬಯಕೆ, ಅದಕ್ಕೋಸ್ಕರಹಟ. ಮನಸ್ಸಿದ್ದರೆ ಮಾರ್ಗ. ಪ್ರಾಥಮಿಕ ವಿದ್ಯಾಭ್ಯಾಸ ಸ್ವಗ್ರಾಮದಲ್ಲಿ ಮುಗಿಸಿ, ಇಡಗೂರು ಕವಿ ಸಿದ್ದಪ್ಪನವರ ಹತ್ತಿರ ಕೆಲಕಾಲ ವಿದ್ಯಾಭ್ಯಾಸ. ನಂತರ ಶ್ರೀಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮುಂದುವರಿಕೆ. ವಾರಾನ್ನದ ಮನೆಗಳಲ್ಲಿ ಮತ್ತು ಶ್ರೀಮಂತ ಮಕ್ಕಳಿಗೆ ಮನೆಪಾಠ ಹೇಳಿಕೊಟ್ಟು, ಹಣಗಳಿಸಿ ವಿದ್ಯಾಭ್ಯಾಸ ಮುಂದುವರಿಸಿದ ಶ್ರಮಿಕ. ಕನ್ನಡ ವಿದ್ವಾನ್ (ಮದರಾಸು ವಿಶ್ವವಿದ್ಯಾನಿಲಯ) ಶಕ್ತಿ ವಿಶಿಷ್ಟಾದ್ವೈತ ವಿದ್ವಾನ್, ಇವೆರಡನ್ನು ಸ್ವಂತ ಅಭ್ಯಾಸಮಾಡಿ ಪಡೆದ ಸಾಹಸಿ.

ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾಪಾಠಶಾಲೆಯ ತರ್ಕ ಅಲಂಕಾರ ವಿದ್ವಾನ್ ಶ್ರೀ ವೈ. ವಿಶ್ವನಾಥಶಾಸ್ತ್ರಿಗಳು ಇವರ ನೆಚ್ಚಿನ ಗುರುಗಳು. ತ್ರಿವಿಧದಾಸೋಹ ಮೂರ್ತಿ-ಗಳು, ತಪೋನಿಷ್ಠರು, ಸಿದ್ಧಗಂಗಾ ಮಠಾಧ್ಯಕ್ಷರು ಆದ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಮತ್ತು ವರಕವಿ ನಿಡುಮಾಮಿಡಿ ಮಠಾಧ್ಯಕ್ಷರು ಆದ ಡಾ|| ಜ.ಚ.ನಿ. ಯವರಿಗೆ ಶ್ರೀ ನಂಜುಂಡಾರಾಧ್ಯರು ನಿಕಟವರ್ತಿ ಕರ್ನಾಟಕಾದ್ಯಂತ ಪ್ರೀತಿಯ ಶಿಷ್ಯಕೋಟಿಯನ್ನು ಪಡೆದ ಭಾಗ್ಯಶಾಲಿಗಳು.

ಶ್ರೀ ಮಠಕ್ಕೆ ಸಂಬಂಧಪಟ್ಟ ಸಾಹಿತ್ಯ,

1. ಶ್ರೀ ಸಿದ್ಧಗಂಗಾ ಕ್ಷೇತ್ರ (ಸಂಸ್ಕೃತ)
2. ಉದ್ದಾನ ಶಿವಯೋಗಿಗಳ ಜೀವನ ಚರಿತ್ರೆ,
3. ಸಿದ್ಧಗಂಗಾ ಕ್ಷೇತ್ರದ ಇತಿಹಾಸ,
4. ನಾನು ಕಂಡ ದಾಸೋಹ ತಪೋಧನ.

ಸಾಹಿತ್ಯ ಲೋಕಕ್ಕೆ ಅಪಾರ ಕೊಡುಗೆಯನ್ನು ನೀಡಿ ತುಂಬ ಸಾರ್ಥಕ ಜೀವನ ನಡೆಸಿ ಅಮರರಾಗಿರುವ ಅವರ ಆತ್ಮಕ್ಕೆ ಶಾಂತಿ ಮತ್ತು ಅವರ ಕುಟುಂಬ ವರ್ಗದವರಿಗೆ ನೆಮ್ಮದಿ ಸಿಗಲೆಂದು ಭಗವಂತನಲ್ಲಿ ಪ್ರಾರ್ಥನೆ.

# ದೆಹಲಿಯಲ್ಲಿ ಅಕ್ಕಮಹಾದೇವಿ ಕುರಿತು ವಿಚಾರಗೋಷ್ಠಿ ಸ್ತ್ರೀ ಸಮಾನತೆಗೆ ಹೋರಾಡಲು ಕರೆ

ಎಂ. ಬಿ. ಸಾಮಗ

ದೆಹಲಿ ಕನ್ನಡಿಗ

ನವದೆಹಲಿ, ಡಿ. 5, "ಅಕ್ಕಮಹಾದೇವಿ ಮತ್ತು ಸ್ತ್ರೀ ಸ್ವಾತಂತ್ರ್ಯ" ಎನ್ನುವ ಕುರಿತು ಡಿಸೆಂಬರ್ 1ರಂದು ದೆಹಲಿಯಲ್ಲಿ ವಿಚಾರಗೋಷ್ಠಿ ನಡೆಯಿತು. ದೆಹಲಿ ಕನ್ನಡಿಗ ಪತ್ರಿಕೆ ಏರ್ಪಡಿಸಿದ್ದ ಈ ವಿಚಾರಗೋಷ್ಠಿಯಲ್ಲಿ ಸಾಹಿತಿಗಳು, ಕಲಾವಿದರು, ಪ್ರಾಧ್ಯಾಪಕರು, ಪತ್ರಕರ್ತರು ಭಾಗವಹಿಸಿದ್ದರು.

ವಿಚಾರಗೋಷ್ಠಿ ಉದ್ಘಾಟಿಸಿದ ಲೇಖಕಿ ಮತ್ತು ದೆಹಲಿ ಆಕಾಶವಾಣಿಯ ಕನ್ನಡ ವಿಭಾಗದ ಮುಖ್ಯಸ್ಥೆ ಶ್ರೀಮತಿ ಸುಭಾಬನ್ನೂರ ದಾಸ್ ಅವರು ಸ್ತ್ರೀಯರು ತಾವು ನಂಬಿದ ತತ್ವಗಳನ್ನು ಆಚರಣೆ ತರುವಾಗ ಬರುವ ಯಾವ ತೊಂದರೆಗಳಿಗೂ ಹೆದರ-ಬಾರದೆಂದರು. ವಚನ ಸಾಹಿತ್ಯದಲ್ಲಿ ಅಕ್ಕಮಹಾದೇವಿಯವರ ವಚನಗಳಿಗೆ ಸಮಾನ ಸ್ಥಾನ ನೀಡಬೇಕೆಂದ ಸುಭಾ ಅವರು ಮಹಿಳಾ ಸಾಹಿತಿಗಳಿಗೆ ಕೀಳರಿಮೆ ಸರಿಯಲ್ಲವೆಂದರು.

ಕವಿ ಜಿ. ಮುನಿಸ್ವಾಮಿ ಅವರು-ರಾಷ್ಟ್ರಮಟ್ಟದಲ್ಲಿ ವಚನಸಾಹಿತ್ಯಕ್ಕೆ ಪ್ರಚಾರ ಸಿಗಬೇಕಾಗಿದೆಯೆಂದರು. ಪ್ರಾಧ್ಯಾಪಕ ಜಿ. ಎಂ. ನಟರಾಜ್ ಅವರು ಶಿಕ್ಷಣರಂಗದಲ್ಲಿ ವಿದ್ಯಾರ್ಥಿಗಳಲ್ಲೇ ಸಮಾನತೆಯ ಮನೋಭಾವ ಮೂಡಿಸಬೇಕೆಂದರು, ಭಾಷಾಂತರಕಾರ ಟಿ. ಗೋಪಾಲಕೃಷ್ಣ ಅವರು ಮಹಿಳೆಯರು ಅಕ್ಕನ ತತ್ವಗಳನ್ನು ಆದರ್ಶವಾಗಿರಿಸಿ ಕೊಳ್ಳಬೇಕೆಂದರು. ಲೇಖಕ ಜಿ.ಆರ್.ರಂಗಸ್ವಾಮಯ್ಯ ಅವರು ಅಕ್ಕನ ಬಗ್ಗೆ ಇರುವ ವಿವಾದಗಳನ್ನು ಬಗೆಹರಿಸಲು ಇನ್ನಷ್ಟು ಸಂಶೋಧನೆ ನಡೆಸಬೇಕೆಂದರು.

ಅಧ್ಯಕ್ಷತೆ ವಹಿಸಿದ್ದ ಸಾಹಿತಿ ಮತ್ತು ಪತ್ರಕರ್ತ ಬೀ. ಸಾಮಗ ಅವರು ದೆಹಲಿಯಲ್ಲಿ ಅಕ್ಕಮಹಾದೇವಿ ಸ್ಮಾರಕ ಸಂಶೋಧನಾ ಕೇಂದ್ರ ಸ್ಥಾಪಿಸಬೇಕೆಂದು ಆಗ್ರಹಪಡಿಸಿ-ದರಲ್ಲದೆ ದೆಹಲಿಯಲ್ಲಿ ಅಕ್ಕನ ವಿಗ್ರಹ ಸ್ಥಾಪಿಸಿ, ರಸ್ತೆಗೆ ಅಕ್ಕನಹೆಸರಿಡಲು ಹೋರಾ-ಡುವುದಾಗಿ ಹೇಳಿದರು. ಸಾಧ್ಯವಿರುವ ಎಲ್ಲಾ ರಂಗಗಳಲ್ಲಿ, ಸ್ತ್ರೀಯರಿಗೆ ಸಮಾನಸ್ಥಾನ ನೀಡಬೇಕೆಂದ ಸಾಮಗ ಅವರು ಸ್ತ್ರೀಯರು ಪ್ರತಿಭಟಿಸುವ ಪರಿಸ್ಥಿತಿಯನ್ನು ಪುರುಷರು ಸೃಷ್ಟಿಸಬಾರದೆಂದರು.

ಅಕ್ಕಮಹಾದೇವಿಗೆ ಸಂಬಂಧಿಸಿದ ಪುಸ್ತಕಗಳ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು.

# ಕನಸಿನ ಕನ್ಯೆ ವೈಜ್ಞಾನಿಕ ಕಿರುಧಾರಾವಾಹಿ–11.

ಶ್ರೀ ಪ. ರಾಮಕೃಷ್ಣ ಶಾಸ್ತ್ರಿ, "ಶಿವಶಕ್ತಿನಿಲಯ," ಮಜ್ಜಿಗ, ದಕ್ಷಿಣಕನ್ನಡ ಜಿಲ್ಲೆ.

ರಾಣಿ ಉಮಾ ತನ್ನ ಕೋಣೆಯಲ್ಲಿ ಮುಂದೆ ನಡೆಯಬೇಕಾದ ತನ್ನ ಮನದ ವಾಂಛಿತವನ್ನು ಕಾರ್ಯಗತಮಾಡಲು ಉಪಾಯಗಳನ್ನು ಯೋಚಿಸುತ್ತಿದ್ದಳು. ಅದಕ್ಕೆ ಸರಿಯಾಗಿ ನವರಾತ್ರಿ ಹಬ್ಬವೂ ಬರುತ್ತಿರುವುದು. ಅವಳ ಮನದಿಂಗಿತ ತಿಳಿದೇ ಎಂದು ಸಂತಸಪಟ್ಟಳು. ನವರಾತ್ರಿ ಉತ್ಸವ ಈ ವರ್ಷ ವೈಭವೋಪೇತವಾಗಿ ಜರುಗಿಸಿ, ಹಳ್ಳಿ ಹಳ್ಳಿಯಿಂದ ಜನರು ಬರುವಂತೆ ಮಾಡಿ ಆ ಜನ ಗುಂಪು ಸೇರಿರುವಾಗ ಕಾತ್ಯಾಯಿನಿಯನ್ನು ಆ ಮಧ್ಯೆ ಬಿಡಬೇಕು. ಆಕೆ ಹಸಿದ ಸಿಂಹಿಣಿಯಂತೆ ಜನರನ್ನು ಕೊಂದು, ಪರಚಿ, ಕರುಳನ್ನೆಳೆದು, ಹೆಣಗಳ ರಾಶಿಯನ್ನೆ ಒಟ್ಟಿ ಅದರ ಮೇಲೆ ನೃತ್ಯವಾಡುವುದನ್ನು ನೋಡಬೇಕು. ತೃಪ್ತಿಯಿಂದ ನಗಬೇಕು. ಅಂಥ ದಿನ ಹತ್ತಿರ ಬರುತ್ತಿದೆ ತನ್ನ ಆಸೆ ಕೊನೆಗೊಳ್ಳುತ್ತಿದೆಯೆಂದು ತುಂಬು ಆಸೆಯಿಂದ ಸಂತಸದ ಪರಮಾವಧಿಯನ್ನೇರಿ ಕುಳಿತಳು. ಅದೇ ಸಂತಸದಲ್ಲಿ ಮಂತ್ರಿಯನ್ನು ಬರಹೇಳಿದಳು.

ಮಂತ್ರಿ ಬಂದು ವಿನಯವಾಗಿ ಬಾಗಿನಿಂತ. ಆಗ ರಾಣಿ, "ಈ ವರ್ಷ ವೈಭವೋಪೇತವಾಗಿ ನವರಾತ್ರಿ ಉತ್ಸವ ಜರುಗಲಿ. ಸೈನಿಕರಿಗೆ ಹೊಸ ಉಡುಪು ಕೊಡಿಸಿರಿ. ಸೆರೆಮನೆಯಿಂದ ಸೆರೆಯಾಳುಗಳನ್ನು ಬಂಧ ಮುಕ್ತ ಮಾಡಿರಿ. ಛತ್ರದಲ್ಲಿ ಸಕಲರಿಗೂ ಊಟ ಉಡುಗರೆಗಳಾಗಲಿ" ಎಂದಳು.

ಮಂತ್ರಿ ಉಗುಳು ನುಂಗಿ ಹಾಗೇ ಮೌನವಾಗಿ ನಿಂತ. "ಮತ್ತೇನು ?" ಎಂದಳು ರಾಣಿ. ಆತ ನುಡಿದ, "ರಾಜಭಂಡಾರ ಬರಿದಾಗುತ್ತ ಬಂತು. ಪ್ರಭುಗಳು ಹೆಚ್ಚಿನ ತೆರಿಗೆಗಳನ್ನು ಸಹಸಾ ಕಡಿಮೆ ಮಾಡಿದ್ದರು. ಆದರೆ ಅವರ ಅನಂತರ ಅದನ್ನು ಮೊದಲಿನ ಸ್ಥಿತಿಗೇ ತರಲಾಗಿತ್ತು. ಆದರೂ ವೆಚ್ಚಗಳು ದಿನೇ ದಿನೇ ಹೆಚ್ಚಾಗತೊಡಗಿವೆ ... "

"ವಿಶೇಷ ಸಂದರ್ಭಕ್ಕಾಗಿ ಹೊಸ ತೆರಿಗೆ ಹಾಕಿರಲ್ಲ"

"ಈಗಿನ ತೆರಿಗೆಯೇ ಹೆಚ್ಚಾಯಿತು ಎಂದು ರೈತರು ಕಣ್ಣೀರು ಮಿಡಿಯುತ್ತಿದ್ದಾರೆ. ಅಲ್ಲದೆ ಪ್ರಭುಗಳ ಆತ್ಮಕ್ಕೂ ಅದರಿಂದ ಶಾಂತಿ ದೊರೆಯಲಾರದು...".

"ಅದೆಲ್ಲ ನಮಗೂ ಗೊತ್ತು. ರಾಜಭಂಡಾರ ಬರಿದಾದರೆ ಅದನ್ನು ತುಂಬಿಕೊಡಬೇಕಾದುದು ಮಂತ್ರಿಗಳ ಹೊಣೆ. ಕರ್ತವ್ಯಭ್ರಷ್ಟರಾಗಿ ಮಾತನಾಡಬೇಡಿ. ಉತ್ಸವವಂತು ವಿಜೃಂಭಣೆಯಿಂದ ನಡೆಯಲಿ....'' ರಾಣಿಯ ಮಾತು ಚೂರಿಯ ಅಲಗಿನಂತಿತ್ತು.

ಮಂತ್ರಿ ಸಾವರಿಸಿಕೊಂಡು, "ಅಲ್ಲದೆನ್ಯಾಯವಿಚಾರಣೆಯು ಮೊದಲಿನಂತೆ ನಡೆಯುತ್ತಿಲ್ಲ ಎಂದು ದೂರಿಕೊಳ್ಳುತ್ತಾರೆ.... "ಎಂದ." ಯಾರು ಹೇಳಿದರು? ಅವರತಲೆ ತುಂಡರಿಸ ಬೇಕಾಗಿತ್ತು. ಏಕೆ ನ್ಯಾಯ ವಿಚಾರಣೆ ಮಾಡಲಿಲ್ಲ?" ಗರ್ಜಿಸಿ ರಾಣಿ ಕೇಳಿದಳು,

"ಹೇಗೆ ಮಾಡುವುದು ಹೇಳಿ? ತಮ್ಮ ಕೃಪಾಛತ್ರದಡಿ ಇರುವವರೇ ಆ ತಪ್ಪು ಎಸಗಿದ್ದಾರೆ. ಹಳ್ಳಿಗೆ ನಟ್ಟಹಗಲು ಹೊಕ್ಕುಮನೆಗೆ ಬೆಂಕಿಯಿಕ್ಕಿ ವೃದ್ಧರನ್ನೂ ಮಕ್ಕಳನ್ನೂ ಕೊಂದು ಕೇಕೆ ಹಾಕಿದ್ದಾರೆ. ಅದು ಸನ್ನಿಧಿಗೆ ಅರಿತಿರಬಹುದು"

ಮೆಟ್ಟಿಬಿದ್ದಳು ಉಮೆ. ಆಕೆ ಸಾವರಿಸಿಕೊಂಡು," ಅದನ್ನು ನಾನು ವಿಚಾರಿಸಿ ಮುಂದಾಗದಂತೆ ನೋಡಿಕೊಳ್ಳುತ್ತೇನೆ. ಉತ್ಸವ ಮಾತ್ರ ಯಾವಕೊರತೆಯೂ ಇಲ್ಲದೆ ಜರಗಲಿ" ಎಂದಳು.

ಮಂತ್ರಿ ಅದೇ ಮಾತಿನ ಕೊನೆಯೆಂದು ತಿಳಿದು ಹೊರಟುಹೋದ. ಆಗ ಅವನ ಎದುರು ದಾಸಿಯೊಬ್ಬಳು ಏದುತ್ತ ರಾಣಿಯ ಅಂತಃಪುರವನ್ನು ಬೆದರುತ್ತ ಹೊಕ್ಕಳು.

ದಾಸಿಹೇಳಿದ್ದೇನು? ಅದನ್ನು ಕೇಳಿ ರಾಣಿಯ ನರನರವೂ ಕಾವೇರಿ ಉಕ್ಕಿನ ತಂತಿಯಂತೆ ಸೆಟೆದು ನಿಂತಿವೆ. ಧಮನಿಯ ರಕ್ತ ಬಿಸಿಯೇರಿದೆ. ನಿಂತ ಕಾಲು ನಿಂತಲ್ಲಿಂದ ಗೊತ್ತು ಗುರಿಯಿಲ್ಲದೆ ಅಲೆದಾಡತೊಡಗಿದೆ. ಮೂಗಿನ ಹೊರಳೆಗಳರಳಿ ಉಸಿರು ಬುಸುಗೊಡತೊಡಗಿದೆ, ಆಕೆಕೆರಳಿದಸರ್ಪಿಣಿಯಾಗಿದ್ದಳು, ಹಸಿದಸಿಂಹಿಣಿಯಾಗಿದ್ದಳು. ಗಾಯಗೊಂಡ ವಾರಾಹಿಯಾಗಿದ್ದಳು.

ಆ ದೃಶ್ಯವನ್ನು ಕಂಡ ದಾಸಿ ಬೆದರುತ್ತ ನಿಲ್ಲಲು ಶಕ್ತಿಯಿಲ್ಲದೆ ನಿಂತಲ್ಲಿ ಕುಸಿದು ಕುಳಿತಳು. ರಾಣಿಯ ದಪ್ಪಹೆಜ್ಜೆಗೆ ಆಕಾಶ ಭೂಮಿಗಳೇ ಒಡೆಯುವುದೇನೋ ಎಂದು ಬೆದರಿ ನಿಂದಳು. ನಡೆದುದನ್ನು ನಿವೇದಿಸಿದಾಗ, " ಹೋಗು " ಎಂದು ಗರ್ಜಿಸಿ ನುಡಿದಳು ರಾಣಿ. "ನನ್ನ ಎದುರು ನಿಲ್ಲಬೇಡ. ಅಲ್ಲಿ ನಿನ್ನ ಕೆಲಸ ಏನಿದೆಯೋ ಅದನ್ನು ಮಾಡು, ಹುಂ, ನಡೆ"

'ಬದುಕಿದೆಯಾ ಬಡಜೀವವೇ' ಎಂದುಕೊಂಡ ದಾಸಿ ಮೆಲ್ಲನೆ ತೆವಳುತ್ತ ಅಂತಃ ಪುರದಿಂದ ಹೊರಬಿದ್ದು ಒಂದೇ ಓಟದಿಂದ ಹೊರಗೋಡಿ ತನ್ನ ನರಿಯುತಲೆಯನ್ನಿಟ್ಟುಕೊಂಡು ಸುರಂಗಮಾರ್ಗದತ್ತ ನಡೆದಳು. ಆಕೆ ಬೆದರುತ್ತ ಆಗಾಗ ಹಿಂತಿರುಗಿ ನೋಡುತ್ತ ರಾಣಿಬರುವಳೇ ಎಂದು ಎರಳೆಯಂತೆ ಕಣ್ಣು ಹೊರಳಿಸುತ್ತ ಸಾಗಿದಳು.

ರಾಣಿ ಉಮಾ ಶತಪಥ ತಿರುಗಿ ಸಾಕಾಗಿ ಪಲ್ಲಂಗದ ಮೇಲೆ ಮೈಚೆಲ್ಲಿಮಲಗಿದಳು. ಆಕೆಗೆ ಮುಂದೆ ಮಾಡಬೇಕಾದ ಕಾರ್ಯದ ಆರಂಭ ಎಲ್ಲಿಂದ ಎಂದು ಇನ್ನೂ ಯೋಚಿಸಿ ನಿರ್ಧಾರಕ್ಕೆ ಬರಬೇಕಷ್ಟೆ. ಆದರೆ ಅವಳ ನಿರಾಶೆಗೊಂಡ ನೊಂದು ಬೆಂದ ಮನಸ್ಸು ಇದಕ್ಕೆ ಪರಿಹಾರ ಕೊಲೆ ಎಂದೇ ಹೇಳುತ್ತಿತ್ತು, ಆದರೂ ಆಕೆ ಯೋಚಿಸಬೇಕು. ತನ್ನ ಕೈಯಿಂದ ಬೆಳೆಸಿ ನೀರೆರೆದು ಹಸನಾಗುವಂತೆ ಮಾಡಿ ಈಗ ನಗುನಗುತ್ತಿರುವ ಪುಷ್ಪ ಹೊತ್ತು ಬಳುಕುತ್ತಿರುವ ಆ ಗಿಡವನ್ನು ಒಂದೇ ಏಟಿಗೆ ಕತ್ತರಿಸಿ ಹಾಕುವುದು ರಾಣಿಯ ಇಚ್ಛೆಗೆ ವಿರೋಧವಾಗಿತ್ತು. ಮಾಡದೆ ಬೇರೆ ಉಪಾಯಾಂತರಗಳೇ ಕಾಣಿಸುತ್ತಿರಲಿಲ್ಲ.

ಕ್ಷಣ ಹೊತ್ತು ಯೋಚಿಸಿದ ರಾಣಿ ಪಲ್ಲಂಗದಿಂದ ಬಿಟ್ಟಬಾಣದಂತೆ ನೆಗೆದು ನಿಂತಳು. ಒಮ್ಮೆ ವಿಕಟವಾಗಿ ನಕ್ಕಳು, " ಇದೋ ನೋಡು ತೀರಿಸುತ್ತೇನೆ" ಎಂದು ಹಲ್ಲ ಡಿದಳು. ಆ ಪುಟ್ಟಕತ್ತಿಯನ್ನು ತನ್ನ ಕಣ್ಣುಗಳೆದುರು ಹಿಡಿದು ಕ್ರೂರವಾಗಿ ನೋಡುತ್ತ " ನಿನ್ನ ತೃಷೆ ಹಿಂಗುವತನಕ ಬಿಸಿಬಿಸಿಯಾದ ರಕ್ತ ಕುಡಿಸುತ್ತೇನೆ, ಬಾ" ಎಂದಳು. ದಾಪುಗಾಲಿಕ್ಕಿ ಅಂತಃಪುರದಿಂದ ಬಡಬಡ ಇಳಿದಳು. ಆಗ ಅಂಗರಕ್ಷಕ ಬಿಚ್ಚುಗತ್ತಿ ಹಿಡಿದೇ ಅವಳ ಹಿಂದೆ ಹೋದ. ಅದನ್ನು ಕಂಡು ರಾಣಿ ಅವನನ್ನು ಕ್ರೂರವಾಗಿ ನೋಡಿ, "ಎಲ್ಲಿಗೆ?" ಎಂದಳು. ಅಂಗರಕ್ಷಕ ನಿಂತಲ್ಲೆ ಕಲ್ಲಾದ.

ಉಮಾ ತನ್ನ ಕುದುರೆಯ ಮೇಲೇರಿ ಅದನ್ನು ಒತ್ತರದಿಂದ ಓಡಿಸಿದಳು. ಕುದುರೆಯ ವೇಗದಂತೆಯೇ ಅವಳ ಮನದೊಳಗೆ ಕಳೆದ ಒಂದೊಂದು ಘಟನೆಗಳು ತೆರೆತೆರೆಯಾಗಿ ವೇಗವೇಗವಾಗಿ ಬಂದು ಮಾಯವಾಗತೊಡಗಿತು, ಅದನ್ನು ಕಂಡು ಆಕೆ ಓಮ್ಮೆ ಸಂತೋಷಿಸುವಳು; ಇನ್ನೊಮ್ಮೆ ಸಿಟ್ಟುಸಿರುಗರೆಯುವಳು.

ಕುದುರೆ ವೇಗವಾಗಿ ಸಾಗುತ್ತಲೇ ಇತ್ತು' ಇದುವರೆಗಿನ ಸಂಗತಿಗಳು ಕುದುರೆಯ ಮೇಲೆ ಸಾಗುತ್ತಿದ್ದ ಉಮೆಯ ತಲೆಯಲ್ಲಿ ಮಿಂಚಿದುವು ಆಗ ಇನ್ನೊಬ್ಬ ದಾಸಿ ಬಂದು ಹೇಳಿದ ರಹಸ್ಯಸುದ್ದಿ ಬೇರೆಯೇ ಆಗಿತ್ತು. ಪಂಡಿತನನ್ನು ಕೊಂದ ಬಳಿಕ ಕುಡಿದ ದ್ರಾವಕದಿಂದ ಅವಳ ದಾನವತ್ವ ನೀಗಿ ಮಾನವಿಯಾಗಿದ್ದಾಳೆ. ಶಿಕ್ಷಕ ಮತ್ತು ಆಕೆ ಓಡಿಹೋಗುವುದರಲ್ಲಿದ್ದಾರೆ.

ಆ ದ್ರೋಹಿಗಳು ಹೋಗುವುದಾದರೂ ಎಲ್ಲಿಗೆ? ಎಂದು ಉಮಾ ಹಲ್ಲುಕಚ್ಚಿ-ಕೊಂಡಳು. ತನ್ನ ಸೊಂಟವನ್ನು ಮುಟ್ಟಿನೋಡಿಕೊಂಡು ಅಲ್ಲಿನ್ನೂ ಸ್ವಸ್ತವಾಗಿ ಮಲಗಿರುವ ಖಡ್ಗವನ್ನು ಕಂಡು ಸಂತಸಪಟ್ಟಳು.

ಕುದುರೆ ನಿಶ್ಚಿತ ಸ್ಥಾನಕ್ಕೆ ಬಂದಿತು. ದಾಸಿ ಹೇಳಿದ ಹೊತ್ತು ಸಮೀಪಿಸಿತ್ತು. ಆದರೆ ಆ ವ್ಯಕ್ತಿಗಳನ್ನು ಆಕೆ ಇನ್ನೂ ಕಾಣಲಾರಳು, ದಾಸಿಹೇಳಿದ್ದು ಸುಳ್ಳೇ ಎಂದು ಅನು-ಮಾನ ಬಂದು ಆಕೆ ಪ್ರಯೋಗಶಾಲೆಯತ್ತ ಹೆಜ್ಜೆ ಹಾಕಿದಳು. ಪ್ರಯೋಗಶಾಲೆಯೊ-ಳಗಿನ ದೃಶ್ಯ ಕಂಡು ಮೆಟ್ಟಿಬಿದ್ದಳು ಉಮಾ.

ಸಿದ್ಧಗಂಗಾ

ಉಳಿದಕತೆ ಭಾಗ ಹದಿನಾಲ್ಕು :-

ಸಂಜೆಯ ತನಕ ಚೆನ್ನಾಗಿ ನಿದ್ರಿಸಿದಳು ಕಾತ್ಯಾಯಿನಿ. ಇನ್ನೇನು ಆಕೆ ಪಂಜರದಿಂದ ಬಿಡುಗಡೆಗೊಳ್ಳಲು ಹೆಚ್ಚು ಸಮಯ ಉಳಿದಿರಲಿಲ್ಲ. ಶಿಕ್ಷಕನ ನಿರ್ಧಾರ-ದಲ್ಲಿ ಬದಲಾವಣೆಯೇನೂ ಆಕೆಗೆ ಕಂಡಿರಲಿಲ್ಲ. ಅವನೂ ಹೊರಡಲು ಸಿದ್ಧನಾಗಿದ್ದ. ಕಾವಲುಗಾರರೆಲ್ಲ ನಿದ್ರಿಸಿರುವಾಗ ಅವರು ಹೊರಟು ಹೋಗಬೇಕು. ಅದಕ್ಕಾಗಿ ಅವರು ಒಂದಿಷ್ಟು ಮುನ್ನೆಚ್ಚರಿಕೆಯಲ್ಲಿರಬೇಕು.

ಹಾಗೆಯೇ ಮೈ ಕೈಯನ್ನು ಕೊಡವಿಕೊಂಡಳು. ಏಕೋ ಜಡವಾದಂತೆ ಅವಳಿಗನಿಸುತ್ತಿತ್ತು. ಹೀಗೆ ಜಡವಾದಾಗ ಮನಸ್ಸು ಉಲ್ಲಸಿತವಾಗಲು ಪಂಡಿತ ಆಗಾಗ ಏನೋದ್ರಾವಕ ಕೊಡುತ್ತಿದ್ದ. ಅದನ್ನು ಕುಡಿದೊಡನೆಯೇ ಶರೀರ ಗಾಳಿಯಲ್ಲಿ ಹಾರಾಡುವ ಹತ್ತಿಯಷ್ಟು ಹಗುರವಾದಂತೆನಿಸುತ್ತಿತ್ತು. ಕೈಕಾಲು ಬೀಸಿನಡೆಯೋಣ ಎಂಬ ಹುರುಪು ಬರುತ್ತಿತ್ತು. ಆದರೆ ಇಂದು ಆ ಪಂಡಿತರು ಎಲ್ಲಿದ್ದಾರೆ, ಅವರನ್ನಾಕೆ ಕೊಂದಿದ್ದಾಳಲ್ಲ?

ಏಕೋ ಪಕ್ಕನೆ ನೆನಪೊಂದು ಬಂದಿತು. ಯಾರೊ ಕನಸಿನಲ್ಲಿ ಹೇಳಿದಂತಿತ್ತು. ಏನದು? ಓ, ಔಷಧ ಕೋಣೆಯಲ್ಲೆ ತನಗೆ ಕುಡಿಯಲಾಗಿ ದ್ರಾವಕವಿಟ್ಟಿದ್ದಾರೆ, ಅದನ್ನು ಕುಡಿದರೆ ಶಕ್ತಿಯೂ ಸಹನೆಯೂ....ಓ, ಇನ್ನೇನೋ. ಕಾತ್ಯಾಯನಿ ಪಂಡಿತನ ಔಷಧಾಲಯವನ್ನು ಹೊಕ್ಕಳು. ಎದುರೆ ಪಾತ್ರೆಯೊಂದರಲ್ಲಿ ದ್ರಾವಕ ಮುಚ್ಚಿಟ್ಟಿತ್ತು. ಅಲ್ಲಿಗೆ ಯಾರೂ ಪ್ರವೇಶಿಸದೆ ಇದ್ದುದರಿಂದ ತಟ್ಟೆಯ ಮೇಲೆ ಧೂಳು ಮುಸುಕಿತ್ತು. ಆ ತಟ್ಟೆಯನ್ನು ಅತ್ತ ಸರಿಸಿ, ತಾನುಬಹು ದೊಡ್ಡ ತಪ್ಪು ಮಾಡುತ್ತಿದ್ದೇನೆಂಬ ಅರಿವಿಲ್ಲದೆ ಆ ದ್ರಾವಕವನ್ನು ಗಟಕರಿಸಿದಳು. ಯಾವ ಶರೀರದ ಜಡತೆಯನ್ನು ಕಳೆಯಲು ಔಷಧ ಕುಡಿದಳೋ ಅದೇ ಅವಳನ್ನು ದಾನವಿಯನ್ನಾಗಿ ಮಾಡುವ ಕ್ರೂರ ವಿಷವಾಗಿತ್ತೆಂಬುದನ್ನು ಆಕೆಯಾದರೂ ಹೇಗೆ ಬಲ್ಲಳು? ಅದನ್ನು ಕುಡಿದೊಡನೆಯೇ ಆಕೆಗೆ ನಿದ್ರೆ ಬಂದಂತಾಯಿತು. ಅಲ್ಲೆ ಇದ್ದ ಮಂಚದಲ್ಲಿ ಉರುಳಿದಳು.

ಶಿಕ್ಷಕ ತನ್ನ ಹೊರಡುವ ತಯಾರಿಯನ್ನು ಮಾಡಿ ಕಾವಲಿನ ಭಟರಿಗೆ ಚೆನ್ನಾಗಿ ಭಂಗಿಯನ್ನು ಕುಡಿಸಿ ತನ್ನ ದಾರಿಯನ್ನು ನಿಷ್ಕಂಟಕ ಮಾಡಿಕೊಂಡಿದ್ದ. ಅವನು ಕಾತ್ಯಾಯನಿಯನ್ನು ಹುಡುಕುತ್ತ ಕೋಣೆಯಿಂದ ಕೋಣೆಗೆ ನಡೆದ. ದೀಪಟಿಗೆಯ ಮಂದ ಪ್ರಕಾಶದಲ್ಲಿ ಅವನು ಹುಡುಕಿದ. ಆದರೆ ಅವನಿಗೆ ಎಲ್ಲಿಯೂ ಆಕೆ ಕಾಣ ಸಿಕ್ಕಲಿಲ್ಲ. ಹಾಗೆಯೇ ತುಸುಹೊತ್ತು ನಿಂತ.

ಪಂಡಿತನ ಕೋಣೆಯ ಬಾಗಿಲು ತೆರೆಯಿತು. ವಿಕರಾಳ ವ್ಯಕ್ತಿಯೊಂದು ಹೊರಗೆ ಬಂದಿತ್ತು. ಸುಕ್ಕುಗಟ್ಟಿದ ಉದ್ದ ಕೂದಲಿನ, ಕೋರೆ ಹಲ್ಲಿನ, ವಿಕಾರ ಮೂಗಿನ ಆ ವ್ಯಕ್ತಿ ಬಿಲದಂಥ ಬಾಯನ್ನು ತೆರೆದು ಎದುರು ನಿಂತು ಗರ್ಜಿಸಿತು. ಅದನ್ನು ಕಂಡ ಶಿಕ್ಷಕ ಚಿಟ್ಟನೆ ಚೀರಿದ. ನೆಲದ ಮೇಲೆ ದೊಪ್ಪನೆ ಬಿದ್ದ.

ಔಷಧಿ ಪ್ರಭಾವದಿಂದ ಕಾತ್ಯಾಯನಿಯ ಸುಂದರ ರೂಪ ಮಾಯವಾಗಿ ವಿಕಾರ ರೂಪವುಂಟಾಗಿ ಭೀಕರ ರಕ್ತ ತೃಷೆಯೂ ಉಂಟಾಗಿತ್ತು. ಯಾರನ್ನು ಕಂಡರೂ ಬಡಿದು ತಿಂದೇನು, ಏನನ್ನು ಕಂಡರೂ ಅಪ್ಪಳಿಸಿ ಒಗೆದೇನು ಎಂಬ ಹುರುಪಿನಿಂದ ಆಕೆ ಹೊರಟಿದ್ದಳು. ಯಾವ ಅಡೆತಡೆ ಆಕೆಗಿಲ್ಲಿಲ್ಲ. ಹೃದಯವೆಂಬುದೇ ಮರೆಯಾಗಿತ್ತು. ಪಾಪಭೀತಿ ಸರಿದಿತ್ತು ಬಿದ್ದ ಶಿಕ್ಷಕನನ್ನು ಎತ್ತಿ ಚೆಂಡು ಹೊಡೆದಂತೆ ಹೊಡೆದು ವಿಕಟವಾಗಿ ನಕ್ಕಳು. ತೂಗುತ್ತಿರುವ ದೀವಟಿಗೆ ಹಿಡಿದು ಬೀಸಿ ಯಾವು ಯಾವುದಕ್ಕೋ ಬೆಂಕಿಕೊಟ್ಟರು. ನಿದ್ದೆಯಲ್ಲಿ ಮುಳುಗಿದವರನ್ನು ತುಳಿದು ಎಬ್ಬಿಸಿ, ಅವರನ್ನು ಕಚ್ಚಿ ಕಚ್ಚಿ ಕೊಂದಳು. ಅರಮನೆಯಸುತ್ತೂ ಬೆಂಕಿ ಪ್ರಜ್ವಲಿಸಿದಾಗ ಆಕೆ ವಿಕಟವಾಗಿ ನಕ್ಕಳು.

ಅದೇ ಸಮಯ ರಾಣಿ ಅಲ್ಲಿಗೆ ಬಂದು ನಿಂತು ಆ ವಿಕಟಾಟ್ಟಹಾಸಗೈಯುವ ವಿಕಾರ ರೂಪಿಯನ್ನು ಕಂಡು ಬೆಚ್ಚಿಬಿದ್ದಳು. ಕಾತ್ಯಾಯಿನಿ ಹುಚ್ಚೆದ್ದು ಕುಣಿಯುತ್ತಿದ್ದಳು; ಬೆಂಕಿ ನಾಲ್ಕು ಕಡೆಯಿಂದಲೂ ಕೆನ್ನಾಲಗೆಯನ್ನೆಳೆದು ಬರುತ್ತಿರುವಾಗ ಅದನ್ನು ಕಂಡು ನಗುತ್ತಿದ್ದಳು. ಅವಳ ಕೆಂಗಣ್ಣು ರಾಣಿಯೆಡೆಗೆ ಹರಿಯಿತು.

ಆಕೆ ದಡಬ್ಬನೆ ಅತ್ತ ಓಡಿದಳು. ರಾಣಿಯನ್ನು ಹಿಡಿದು ಬೀಸಿದಳು. ಪ್ರಯೋಗ ಶಾಲೆಯೆಡೆಗೆ ನಡೆದಳು. ಅಗ್ನಿಯು ಗಾಳಿಯೊಡನೆ ಮೊರೆಯುತ್ತ ಪ್ರಯೋಗ ಶಾಲೆಯನ್ನೆ ಕಬಳಿಸಲು ಯತ್ನಿಸುತ್ತಿತ್ತು. ಅದರ ನಾಲಗೆ ಆಕಾಶವನ್ನೇ ನೆಕ್ಕಿ ನೋಣೆಯುಲು ಗಾಳಿಯೊಡನೆ ವೇಗವಾಗಿ ಧಾವಿಸುತ್ತಿತ್ತು. ಅದರ ಮಧ್ಯೆಯೂ ನಿರ್ಭ್ಯೋಚನೆಯಿಂದ ಕುಳಿತಿದ್ದಳು ಕಾತ್ಯಾಯಿನಿ. ರಾಣಿಯನ್ನು ಅಂಗಾತ ಮಲಗಿಸಿ ಅವಳ ಮೈಯನ್ನು ಸೆಕ್ಕಿದಳು. ಕೊರಳನ್ನು ಹಲ್ಲಿನಿಂದ ಅಮುಕಿ ಹಿಡಿದು ಬಂದ ರಕ್ತದಿಂದ ಬಾಯಿ ಚಪ್ಪರಿಸಿಕೊಂಡಳು.

ರಾಣಿ ವಿಲವಿಲನೆ ಒದ್ದಾಡಿ ತನ ಆಸೆಯ ಫಲ ಕೈಗೆ ಬೀಳುವಾಗಲೇ ದಕ್ಷಿಣಾಧಿಪತಿಯ ಆಹ್ವಾನವನ್ನು ಸ್ವೀಕರಿಸಿ ನಡೆದಿದ್ದಳು. ಅದನ್ನು ಕಂಡೋ ಏನೋ ಉರಿಯುತ್ತಿರುವ ತೊಲೆಯೊಂದು ಮೇಲಿನಿಂದ ಕಾತ್ಯಾಯಿನಿಯ ಮೈ ಮೇಲೆ ಬಿದ್ದಿತು. ಆ ಅಗ್ನಿಯೊಡನೆ ಆಕೆ ಹೋರಾಡುತ್ತಾ ಕೊನೆಗೆ ನಿಶ್ಚಿಂತಳಾದಳು.

ಉಪ ಬಾಲ್ಯದ ಆಸೆಯೊಂದು ಹಲವರ ಬಲಿ ತೆಗೆದು ತನ್ನನ್ನು ಬಲಿ ತೆಗೆದುಕೊಂಡಿತು.

ಕನಸಿನ ಕನ್ಯೆ. ಮುಕ್ತಾಯಗೊಂಡಿದೆ. ಶ್ರೀ ಪ॥ ರಾಮಕೃಷ್ಣ ಶಾಸ್ತ್ರಿಗಳವರಿಗೆ ಅಭಿನಂದನೆಗಳು.

ಸಿದ್ಧಗಂಗಾ

# ಕ್ಷೇತ್ರವಾರ್ತೆ

## ಶ್ರೀಮಠದಲ್ಲಿ ತುಮಕೂರು ಜಿಲ್ಲಾ ಮಟ್ಟದ ಪ್ರೌಢಶಾಲಾ ಕ್ರೀಡಾಕೂಟ.

ನವೆಂಬರ್ 23 90ರಂದು ಜಿಲ್ಲಾ ಕ್ರೀಡಾ ಕೂಟ ಶ್ರೀ ಸಿದ್ಧಗಂಗಾ ಕ್ಷೇತ್ರದ ಶ್ರೀ ಬಸವೇಶ್ವರ ಕ್ರೀಡಾಂಗಣದಲ್ಲಿ 3 ದಿನಗಳು ಜಿಲ್ಲಾ ಪರಿಷತ್ತು ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆಯ ಜಂಟಿ ಆಶ್ರಯದಲ್ಲಿ ನಡೆಯಿತು. ಜಿಲ್ಲಾ ಪ್ರೌಢಶಾಲಾ ಮಟ್ಟದ ಕ್ರೀಡಾಕೂಟವನ್ನು ಹೆಚ್.ಎಂ.ಟಿ ಯ ಜನರಲ್ ಮ್ಯಾನೇಜರ್ ಟಿ.ವಿ. ಶ್ರೀನಿವಾಸನ್ ಉದ್ಘಾಟಿಸಿದರು. ಜಿಲ್ಲಾಧಿಕಾರಿಗಳಾದ ಶ್ರೀ ಐ. ಎರ್. ಪೆರುಮಾಳ್‌ರವರು ಅಧ್ಯಕ್ಷ ಭಾಷಣ ಮಾಡುತ್ತಾ ಇಂತಹ ಕ್ರೀಡಾಕೂಟಗಳಿಗೆ ಪ್ರೋತ್ಸಾಹ ನೀಡುತ್ತಾ, ಯುವ ಜನಾಂಗದ ನಿರ್ಮಾಣದಲ್ಲಿ ನಿರಂತರವಾಗಿ ಶ್ರಮಿಸುತ್ತಾ ಬಂದಿರುವ ಶ್ರೀಮಠವನ್ನು ಮತ್ತು ಸ್ವಾಮಿಗಳಾದ ಶ್ರೀ ಶಿವಕುಮಾರಸ್ವಾಮಿಜೀಯವರನ್ನು ಮುಕ್ತ ಕಂಠದಿಂದ ಪ್ರಶಂಸಿಸಿದರು. ಶ್ರೀ ಶ್ರೀಗಳವರು ನಡೆಸುತ್ತಾ ಬಂದಿರುವ ದಾಸೋಹ, ರಾಷ್ಟ್ರವ್ಯಾಪಿ ಹೆಸರಾಗಿದ್ದು ಕರ್ನಾಟಕಕ್ಕೆ ಶೋಭೆ ತಂದಿರುವುದೆಂದು ನುಡಿದರಲ್ಲದೆ, ಸ್ವಾಮೀಜಿಯವರಿಗೆ 1990ರ ರಾಜ್ಯೋತ್ಸವ ಪ್ರಶಸ್ತಿ ಲಭ್ಯವಾಗಿರುವುದಕ್ಕೆ ಹರ್ಷ ವ್ಯಕ್ತಪಡಿಸಿದರು. ಮುಂದುವರಿದು ಪೂಜ್ಯರು ಮಾಡಿರುವ ಸೇವೆಗೆ "ಪದ್ಮಶ್ರೀ" ಪ್ರಶಸ್ತಿ ದೊರೆಯಬೇಕೆಂದು ತಾವು ಸರ್ಕಾರಕ್ಕೆ ಈ ಬಗ್ಗೆ ಶಿಫಾರಸ್ಸು ಮಾಡಿರುವುದಾಗಿಯೂ ಘೋಷಿಸಿದರು.. ಶ್ರೀಗಳವರು ಮಾಡುತ್ತಿರುವ ಸೇವೆಗೆ "ಭಾರತ ರತ್ನ" ಪ್ರಶಸ್ತಿಯನ್ನೇ ಕೊಡಬೇಕೆಂದು ಜಿಲ್ಲಾಧಿಕಾರಿಗಳು ಅಭಿಪ್ರಾಯಪಟ್ಟರು.

ಪರಮ ಪೂಜ್ಯ ಸ್ವಾಮಿಜೀಯವರು ಮಕ್ಕಳ ಮಾನಸಿಕಆರೋಗ್ಯಕ್ಕೆ ಶಾರೀರಿಕದೃಢತೆ ಅತ್ಯಂತ ಮುಖ್ಯ, ದೈಹಿಕ ಮತ್ತು ಮಾನಸಿಕ ಬಲಾಢ್ಯರಾದ ಮಕ್ಕಳು ಭವಿಷ್ಯಭಾರತದ ನಿರ್ಮಾಣಕ್ಕೆ ಬೇಕಾಗಿದೆ. ಈ ಕ್ರೀಡಾಕೂಟ ಆ ದಿಸೆಯಲ್ಲಿ ಕಾರ್ಯನಿರ್ವಹಿಸಲಿ ಎಂದು ಆಶೀರ್ವದಿಸಿದರು. ಶಿಕ್ಷಣ ಇಲಾಖೆಯ ಡಿ.ಡಿ.ಪಿ.ಐ. ಶ್ರೀ ಕೆ. ರಾಮಯ್ಯನವರು ಪ್ರಾರಂಭದಲ್ಲಿ ಧ್ವಜಾರೋಹಣ ಮಾಡಿದರು. ಸಿದ್ಧಗಂಗಾ ವಿದ್ಯಾ ಸಂಸ್ಥೆಯ ನಿರ್ದೇಶಕರಾದ ಶ್ರೀ ಎಂ. ವಿ. ಸಿದ್ಧಲಿಂಗಮೂರ್ತಿಯವರು ಹಾಗೂ ಸ್ಥಳೀಯ ಮಂಡಲ ಪಂಚಾಯಿತಿ ಪ್ರಧಾನರಾದ ಶ್ರೀ ಕೆ.ಎನ್. ಗೋಪಾಲ್‌ರವರು ಮುಖ್ಯ ಅತಿಥಿಗಳಾಗಿದ್ದರು.

ನವೆಂಬರ್ 25ರಂದು ಶ್ರೀ ಸಿದ್ಧಲಿಂಗಸ್ವಾಮಿಯವರ ಸಮ್ಮುಖದಲ್ಲಿ ಕ್ರೀಡಾ-ಕೂಟದ ಮುಕ್ತಾಯಸಮಾರಂಭವನ್ನು ಏರ್ಪಡಿಸಲಾಗಿತ್ತು, ಶ್ರೀ ಶ್ರೀಗಳವರು ಮಕ್ಕಳ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾಮಠ